# "ಹರಿಹರನ ಪ್ರಭುದೇವರ ರಗಳೆ ಮತ್ತು ಚಾಮರಸನ ಪ್ರಭುಲಿಂಗಲೀಲೆ"

## ಒಂದು ತೌಲನಿಕ ಅಧ್ಯಯನ

(ಕನ್ನಡ ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸಿದ ನಿಬಂಧ)

ಮಾರ್ಗದರ್ಶಕರು :

**ಪ್ರೊ. ಮಾ. ರಾಮಕೃಷ್ಣ**

ಪ್ರಾಧ್ಯಾಪಕರು

ಭಾರತಿ ಕಾಲೇಜು, ಭಾರತಿನಗರ,

ಮದ್ದೂರು ತಾಲ್ಲೂಕು, ಮಂಡ್ಯ ಜಿಲ್ಲೆ.

ಸಂಶೋಧಕರು :

**ಎಂ.ಎಸ್. ಸಿದ್ಧರಾಜು**

ಎಂ.ಫಿಲ್. ಅಭ್ಯರ್ಥಿ

ಎಂ. ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ

ಕರ್ನಾಟಕ ಸಂಘ (ರಿ), ಮಂಡ್ಯ



ಕರ್ನಾಟಕ ಸಂಘ (ರಿ). ಮಂಡ್ಯ

ಎಂ. ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ

(ಕನ್ನಡ ವಿ.ವಿ. ಹಂಪಿ ಮಾನ್ಯತೆ ಪಡೆದಿದ)

2007-08

# “ಹರಿಹರನ ಪ್ರಭುದೇವರ ರಗಳೆ ಮತ್ತು ಚಾಮರಸನ ಪ್ರಭುಲಿಂಗಲೀಲೆ” ಒಂದು ತೌಲನಿಕ ಅಧ್ಯಯನ

(ಕನ್ನಡ ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸಿದ ನಿಬಂಧ)


<u>ಮಾರ್ಗದರ್ಶಕರು :</u>

**ಪ್ರೊ. ಮಾ. ರಾಮಕೃಷ್ಣ**

ಪ್ರಾಧ್ಯಾಪಕರು

ಭಾರತಿ ಕಾಲೇಜು, ಭಾರತಿನಗರ,

ಮದ್ದೂರು ತಾಲ್ಲೂಕು, ಮಂಡ್ಯಜಿಲ್ಲೆ.





<u>ಸಂಶೋಧಕರು :</u>

**ಎಂ.ಎಸ್. ಸಿದ್ದರಾಜು**

ಎಂ.ಫಿಲ್. ಅಭ್ಯರ್ಥಿ

ಎಂ. ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ

ಕರ್ನಾಟಕ ಸಂಘ (ರಿ), ಮಂಡ್ಯ.









**ಕರ್ನಾಟಕ ಸಂಘ (ರಿ), ಮಂಡ್ಯ.**

**ಎಂ. ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ**

(ಕನ್ನಡ ವಿ.ವಿ. ಹಂಪಿ ಮಾನ್ಯತೆ ಪಡೆದಿದೆ)

**2007-08**

## ಮಾರ್ಗದರ್ಶಕರ ದೃಢೀಕರಣ ಪತ್ರ

ಹಂಪಿಯ ಕನ್ನಡ ವಿಶ್ವವಿದ್ಯಾನಿಲಯದ ಮಾನ್ಯತೆ ಪಡೆದಿರುವ ಮಂಡ್ಯದ ಕರ್ನಾಟಕ ಸಂಘವು ನಡೆಸುತ್ತಿರುವ ಎಂ.ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರದಲ್ಲಿ 2007-08ನೇ ಸಾಲಿಗೆ ಕನ್ನಡ ಎಂ.ಫಿಲ್. ಅಭ್ಯರ್ಥಿಯಾಗಿ ಇವರು ಪ್ರವೇಶ ಪಡೆದಿರುತ್ತಾರೆ. ಎಂ.ಫಿಲ್. ಅಧ್ಯಯನದ ಅಂಗವಾಗಿ ಸಂಶೋಧನಾ ನಿಬಂಧ ರಚಿಸಲು **"ಹರಿಹರನ ಪ್ರಭುದೇವರ ರಗಳೆ ಮತ್ತು ಚಾಮರಸನ ಪ್ರಭುಲಿಂಗಲೀಲೆ"** - ತೌಲನಿಕ ಅಧ್ಯಯನ ಎಂಬ ವಿಷಯವನ್ನು ಆಯ್ಕೆ ಮಾಡಿಕೊಂಡು ನನ್ನ ಮಾರ್ಗದರ್ಶನದಲ್ಲಿ ಸಂಶೋಧನೆ ನಡೆಸಿ ಈ ನಿಬಂಧವನ್ನು ರಚಿಸಿರುತ್ತಾರೆ.

ಈ ನಿಬಂಧವನ್ನಾಗಲಿ, ನಿಬಂಧದ ಅಧ್ಯಾಯಗಳನ್ನಾಗಲಿ ಬೇರೆ ಯಾವ ಗ್ರಂಥಗಳು ಹಾಗೂ ನಿಯತಕಾಲಿಕೆಗಳಲ್ಲಿ ಪ್ರಕಟಿಸಿಲ್ಲವೆಂದು ಈ ಮೂಲಕ ದೃಢೀಕರಿಸುತ್ತಿದ್ದೇನೆ. ಕನ್ನಡ ವಿಶ್ವವಿದ್ಯಾನಿಲಯವು ನೀಡುವ ಎಂ.ಫಿಲ್. ಪದವಿಗಾಗಿ ಈ ನಿಬಂಧವನ್ನು ಒಪ್ಪಿಸಿರುತ್ತಾರೆ.

ಮಾರಾಮಕೃಷ್ಣ

ಪ್ರೊ. ಮಾ. ರಾಮಕೃಷ್ಣ
ಪ್ರಾಧ್ಯಾಪಕರು
ಭಾರತೀ ಕಾಲೇಜು, ಭಾರತೀನಗರ
ಮದ್ದೂರು ತಾಲ್ಲೂಕು, ಮಂಡ್ಯ ಜಿಲ್ಲೆ.

ದಿನಾಂಕ : 30-09-2008
ಸ್ಥಳ : ಮಂಡ್ಯ

# ಅಭ್ಯರ್ಥಿಯ ದೃಢೀಕರಣ ಪತ್ರ

ಹಂಪಿಯ ಕನ್ನಡ ವಿಶ್ವವಿದ್ಯಾನಿಲಯದ ಮಾನ್ಯತೆ ಪಡೆದಿರುವ ಮಂಡ್ಯದ ಕರ್ನಾಟಕ ಸಂಘವು ನಡೆಸುತ್ತಿರುವ ಎಂ.ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರದಲ್ಲಿ 2007-08ನೇ ಸಾಲಿಗೆ ಕನ್ನಡ ಎಂ.ಫಿಲ್. ಅಭ್ಯರ್ಥಿಯಾಗಿ ನಾನು ಪ್ರವೇಶ ಪಡೆದಿರುತ್ತೇನೆ. ನನ್ನ ಎಂ.ಫಿಲ್. ಅಧ್ಯಯನದ ಅಂಗವಾಗಿ ಸಂಶೋಧನಾ ನಿಬಂಧ ರಚಿಸಲು **"ಹರಿಹರನ ಪ್ರಭುದೇವರ ರಗಳೆ ಮತ್ತು ಚಾಮರಸನ ಪ್ರಭುಲಿಂಗಲೀಲೆ"** - ತೌಲನಿಕ ಅಧ್ಯಯನ ಎಂಬ ವಿಷಯವನ್ನು ಆಯ್ಕೆ ಮಾಡಿಕೊಂಡು ಪ್ರೊ. ಮಾ. ರಾಮಕೃಷ್ಣ ಅವರ ಮಾರ್ಗದರ್ಶನದಲ್ಲಿ ಸಂಶೋಧನೆ ನಡೆಸಿ ಈ ನಿಬಂಧವನ್ನು ರಚಿಸಿರುತ್ತೇನೆ.

ಈ ನಿಬಂಧವನ್ನಾಗಲಿ, ನಿಬಂಧದ ಅಧ್ಯಾಯಗಳನ್ನಾಗಲಿ ಬೇರೆ ಯಾವ ಗ್ರಂಥಗಳು ಹಾಗೂ ನಿಯತಕಾಲಿಕೆಗಳಲ್ಲಿ ಪ್ರಕಟಿಸಿಲ್ಲವೆಂದು ಈ ಮೂಲಕ ದೃಢೀಕರಿಸುತ್ತಿದ್ದೇನೆ. ಕನ್ನಡ ವಿಶ್ವವಿದ್ಯಾನಿಲಯವು ನೀಡುವ ಎಂ.ಫಿಲ್. ಪದವಿಗಾಗಿ ಈ ನಿಬಂಧವನ್ನು ಒಪ್ಪಿಸುತ್ತಿದ್ದೇನೆ.

ಎಂ. ಎಸ್. ಸಿದ್ದರಾಜು

ಎಂ. ಎಸ್. ಸಿದ್ದರಾಜು
ಎಂ. ಫಿಲ್. ಅಭ್ಯರ್ಥಿ
ಎಂ.ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ
ಕರ್ನಾಟಕ ಸಂಘ(ರಿ), ಮಂಡ್ಯ.

ದಿನಾಂಕ : 30-09-2008

ಸ್ಥಳ : ಮಂಡ್ಯ

"ಹರಿಹರನ ಪ್ರಭುದೇವರ ರಗಳೆ ಮತ್ತು ಚಾಮರಸನ ಪ್ರಭುಲಿಂಗಲೀಲೆ" – ಒಂದು ತೌಲನಿಕ ಅಧ್ಯಯನ

## ಪರಿವಿಡಿ


ಅಧ್ಯಾಯ ೧ — ೧ – ೩

ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಅಧ್ಯಾಯ ೨ — ೪ – ೧೪

ಅ) ಮಹಾಕವಿ ಹರಿಹರನ ಇತಿವೃತ್ತ

ಆ) ಚಾಮರಸನ ಇತಿವೃತ್ತ

ಅಧ್ಯಾಯ ೩ — ೧೫ – ೪೩

ಅ) ಪ್ರಭುದೇವರ ರಗಳೆ : ರಚನೆಯ ಹಿನ್ನೆಲೆ – ಕಥಾವಸ್ತು

ಆ) ಪ್ರಭುಲಿಂಗಲೀಲೆ : ರಚನೆಯ ಹಿನ್ನೆಲೆ – ಕಥಾವಸ್ತು

ಅಧ್ಯಾಯ ೪. ತೌಲನಿಕ ಅಧ್ಯಯನ : — ೪೪ – ೮೪

ಅ) ಎರಡೂ ಕೃತಿಗಳ ಕಥಾವಸ್ತು ಮತ್ತು ವಿನ್ಯಾಸ

ಆ) ಸನ್ನಿವೇಶ ರಚನೆ : ೧. ಅಲ್ಲಮನ ಹುಟ್ಟು – ಪ್ರಭುದೇವರ ರಗಳೆಯ ಕಾಮಲತೆ ಪ್ರಭುಲಿಂಗಲೀಲೆಯ ಮಾಯೆಯ ಭೇಟಿ ; ೨. ಅನಿಮಿಷ ಯೋಗಿಯ ಭೇಟಿ ; ೩. ಗೋರಕ್ಷನ ಭೇಟಿ ; ೪. ಬಸವಣ್ಣನವರ ಭೇಟಿ ; ೫. ಅಜಗಣ್ಣನ ಭೇಟಿ ; ೬. ಗೊಗ್ಗಯ್ಯನ ಪ್ರಸಂಗ ; ೭. ಸಿದ್ಧರಾಮನ ಪ್ರಸಂಗ.

ಇ) ಪಾತ್ರಚಿತ್ರಣ : ೧. ಅಲ್ಲಮ ; ೨. ಮಾಯೆ

ಈ) ಪವಾಡಗಳು

ಉ) ಅಭಿವ್ಯಕ್ತಿ : ೧. ಹರಿಹರನ ಶೈಲಿಯ ವಿಶಿಷ್ಟತೆ, ರಸಗಳು
೨. ಚಾಮರಸನ ಷಟ್ಪದಿ ಶೈಲಿ

ಊ) ಹರಿಹರ ಮತ್ತು ಚಾಮರಸರ ಜೀವನದರ್ಶನ

ಅಧ್ಯಾಯ ೫. ಉಪಸಂಹಾರ — ೮೫ – ೮೬

## ಅಧ್ಯಾಯ - ೧

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಹರಿಹರ ನಡುಗನ್ನಡದ ಪ್ರಮುಖ ಕವಿ. ಕ್ರಾಂತಿಕಾರ ಕವಿ, ಭಕ್ತಕವಿ, ರಗಳೆಯ ಕವಿ ಎಂದೆಲ್ಲ ವಿಮರ್ಶಕರು ಕರೆದಿದ್ದಾರೆ. ಹರಿಹರ ಬರೆದ ಹಲವು ರಗಳೆಗಳಲ್ಲಿ 'ಪ್ರಭುದೇವರ ರಗಳೆ' ಬಹಳ ಮುಖ್ಯವಾದುದಾಗಿದೆ. 12ನೇ ಶತಮಾನದ ಶ್ರೇಷ್ಠ ಶಿವಭಕ್ತ, ಅನುಭಾವಿ ಎಂದೆ ಅಲ್ಲಮಪ್ರಭುವನ್ನು ಗುರುತಿಸಲಾಗಿದೆ. ಬಸವಣ್ಣನನ್ನು ಒಳಗೊಂಡಂತೆ ಸಮಸ್ತ ಶರಣರ ಮೇಲೆ ಅಲ್ಲಮಪ್ರಭುವಿನ ಪ್ರಭಾವ ಗಾಢವಾಗಿದ್ದುದನ್ನು ಕಾಣುತ್ತೇವೆ. ಇಂಥ ಅಲ್ಲಮನ ಬಗ್ಗೆ ಹರಿಹರ ರಗಳೆ ಬರೆದಿದ್ದರೂ ಮುಂದೆ ಬಂದ ಚಾಮರಸನು ಷಟ್ಪದಿ ಛಂದಸ್ಸಿನಲ್ಲಿ 'ಪ್ರಭುಲಿಂಗಲೀಲೆ' ಎಂಬ ಕಾವ್ಯವನ್ನು ಬರೆದಿದ್ದಾನೆ. ಹೀಗೆ ಒಬ್ಬನೇ ವ್ಯಕ್ತಿಯ ಬಗ್ಗೆ ಇಬ್ಬರು ಮಹಾಕವಿಗಳು ಕವ್ಯ ಬರೆದಿರುವುದು ಅಲ್ಲಮನ ಘನ ವ್ಯಕ್ತಿತ್ವವನ್ನು, ಆತನ ಪ್ರಭಾವ ಎಷ್ಟು ಗಾಢವೂ ವ್ಯಾಪಕವೂ ಆಗಿತ್ತೆಂಬುದನ್ನು ತಿಳಿಸುತ್ತದೆ. ಆದುದರಿಂದ ಹರಿಹರನ ಪ್ರಭುದೇವರ ರಗಳೆ ಮತ್ತು ಚಾಮರಸನ ಪ್ರಭುಲಿಂಗಲೀಲೆಯನ್ನು ಕುರಿತು ತೌಲನಿಕವಾಗಿ ಅಧ್ಯಯನ ಮಾಡುವ ಉದ್ದೇಶವನ್ನು ಈ ಪ್ರಬಂಧದಲ್ಲಿ ಇಟ್ಟುಕೊಳ್ಳಲಾಗಿದೆ. ಅದಕ್ಕೆ ಪೂರಕವಾಗುವಂತೆ ಹರಿಹರ ಕವಿಯ, ಮತ್ತು ಚಾಮರಸ ಕವಿಯ ಪೂರ್ವೇತಿಹಾಸಗಳನ್ನು ಅರಿತುಕೊಳ್ಳುವುದು ಅನಂತರ ಪ್ರಭುದೇವರ ರಗಳೆಯ ಕಥಾ ಹಂದರ, ಹಾಗೆಯೇ ಪ್ರಭುಲಿಂಗ ಲೀಲೆಯಲ್ಲಿ ಕಂಡುಬರುವ ಪ್ರಭುದೇವರ ಜೀವನದ ಹಲವು ಮಜಲುಗಳ ವಿವರಗಳನ್ನು ಈ ಭಾಗದಲ್ಲಿ ಅಧ್ಯಯನ ಮಾಡಲಾಗಿದೆ.

ಹರಿಹರ ಮತ್ತು ಚಾಮರಸರ ಈ ಎರಡು ಕಾವ್ಯಗಳಲ್ಲಿನ ಸಾಮ್ಯತೆಯ ಅಂಶಗಳನ್ನು ಗುರುತಿಸಿ, ಅವಲೋಕಿಸುವುದು ನಂತರ ಪ್ರತ್ಯೇಕವಾಗಿ ಒಂದೊಂದೇ ಕೃತಿಗಳಲ್ಲಿರುವ ವಿವರಗಳ ಹಿನ್ನಲೆಯಲ್ಲಿ ಸನ್ನಿವೇಶಗಳನ್ನು ಅವಲೋಕಿಸುವುದರೊಂದಿಗೆ ಅವುಗಳ ಮಹತ್ವವನ್ನರಿತು ಕೊಳ್ಳುವುದು ಈ ಅಧ್ಯಯನದ ಉದ್ದೇಶವಾಗಿದೆ. ಈ ಎರಡೂ ಕೃತಿಗಳಲ್ಲಿನ ಸನ್ನಿವೇಶಗಳನ್ನು ತೌಲನಿಕವಾಗಿ ಅಧ್ಯಯನ ಮಾಡಲಾಗಿದೆ. ಅಲ್ಲಮ, ಮಾಯೆ, ಕಾಮಲತೆ, ಅನಿಮಿಷಯೋಗಿ, ಗೊಗ್ಗಯ್ಯ, ಬಸವಣ್ಣನ ಭೇಟಿ, ಮತ್ತು ಸಿದ್ಧರಾಮರ ಭೇಟಿ ಮುಂತಾದುವುಗಳನ್ನು ಕುರಿತಂತೆ ವಿಶೇಷವಾಗಿ ವಿಶ್ಲೇಷಿಸಲಾಗಿದೆ.

ಹರಿಹರನಿಗೆ ಅಲ್ಲಮಪ್ರಭು 'ಪ್ರಭುದೇವ'ನಾಗಿ ಕಂಡಿದ್ದಾನೆ. ಮನುಷ್ಯ ನೆಲೆಯಿಂದ ಅಲ್ಲಮನು ನಿಧಾನವಾಗಿ ಮೇಲೇರುವ ಚಿತ್ರಣ ಹರಿಹರನ ರಗಳೆಯಲ್ಲಿದೆ. ಆರಂಭದಲ್ಲಿ ಅಲ್ಲಮ ಕಾಮಲತೆಯ ಪ್ರೇಮಪಾಶಕ್ಕೆ ಸಿಕ್ಕಿ ಸಾಮಾನ್ಯ ಮನುಷ್ಯನಂತೆ ವರ್ತಿಸುವುದನ್ನು, ಕಾಮಲತೆಯ ಆಕಸ್ಮಿಕ ಸಾವಿನಿಂದ ಆತ ವಿರಕ್ತನಾಗಿ ಮುಂದೆ ಮಹಾಸಾಧಕನಾಗುವುದನ್ನು ಕಾಣುತ್ತೇವೆ. ಅಲ್ಲಮಪ್ರಭುವಿನ ಬದುಕನ್ನು ವಾಸ್ತವ ನೆಲೆಯಲ್ಲಿ ಚಿತ್ರಿಸಿರುವುದು ಗಮನಾರ್ಹವಾದ ಸಂಗತಿ. ಚಾಮರಸನ ಕಾವ್ಯ ಹರಿಹರನ ರಗಳೆಗಿಂತ ಭಿನ್ನವಾದ ನೆಲೆಯುಳ್ಳದ್ದು. ವಿರಕ್ತ ಚಾಮರಸನಿಗೆ ಅಲ್ಲಮನು ಸಾಮಾನ್ಯ ಮನುಷ್ಯನಲ್ಲ. ಆತ ಶಿವನ ಅವತಾರ. ಆದುದರಿಂದ ಆತನ ಕೃತಿಯ

ಹೆಸರು 'ಪ್ರಭುಲಿಂಗಲೀಲೆ' ಎಂದಾಗಿದೆ. ಇದರಿಂದ ಪ್ರಭು ಬೆರೆಯಲ್ಲ ಲಿಂಗ (ಶಿವ) ಬೇರೆಯಲ್ಲ. ಇದೆಲ್ಲ ಆತನ ಲೀಲೆ ಎಂಬ ನೆಲೆಯಲ್ಲಿ ಚಾಮರಸ ಅಲ್ಲಮನ ಜೀವನವನ್ನು ಚಿತ್ರಿಸಿದ್ದಾನೆ. ಆದುದರಿಂದ ಇಲ್ಲಿ ಅಲ್ಲಮನು ಮಾಯೆಗೆ ಒಲಿಯುವುದಿಲ್ಲ. ಮಾಯೆಯೆ ಅಲ್ಲಮನ ಮುಂದೆ ಸೋತು ಹೋಗುತ್ತಾಳೆ. ಹೀಗಾಗಿ ಈ ಎರಡೂ ಕಾವ್ಯಗಳ ಪಾತ್ರ, ಸನ್ನಿವೇಶಗಳು ಭಿನ್ನವಾಗಿದ್ದು ಅಧ್ಯಯನಕ್ಕೆ ಯೋಗ್ಯವಾಗಿವೆ.

ಈ ಅಧ್ಯಯನದಲ್ಲಿ ಹರಿಹರನ ಬೇರೆ ಯಾವುದೇ ರಗಳೆಗಳನ್ನು, ವಚನಗಳನ್ನು, ಪ್ರಬಂಧದ ಅಧ್ಯಯನಕ್ಕೆ ಬಳಸಿರುವುದಿಲ್ಲ. ಪ್ರಭುದೇವರ ರಗಳೆಯ ಅಧ್ಯಯನದ ಸಂದರ್ಭದಲ್ಲಿ ಶೂನ್ಯ ಸಂಪಾದನೆಗಳು ಮತ್ತು ವಚನಕಾರರ ವಚನಗಳನ್ನು ಬಳಸಿದ್ದರೆ ಇನ್ನು ಹೆಚ್ಚಿನ ಪ್ರಯೋಜನ ದೊರೆಯುತ್ತಿತ್ತು. ಆದರೆ ಅದು ತುಂಬ ವಿಸ್ತಾರವಾದ ಅಧ್ಯಯನವಾಗುವ ಅರಿವಿರುವುದರಿಂದ ಕೇವಲ ಇಲ್ಲಿ ಪ್ರಭುಲಿಂಗಲೀಲೆಯನ್ನು ಮಾತ್ರ ಸೀಮಿತಗೊಳಿಸಿ ಅಧ್ಯಯನ ನಡೆಸಲಾಗಿದೆ. ಇದು ಈ ಅಧ್ಯಯನದ ಮಿತಿ ಎಂದೂ ಗ್ರಹಿಸಬಹುದಾಗಿದೆ. ಹಾಗೆಯೇ ಈ ಪ್ರಬಂಧದ ಮಿತಿಯೂ ಆಗಿದೆ ಎನ್ನುವ ಅರಿವು ನನಗಿದೆ.

ಹರಿಹರ ತನ್ನ ಸಮೀಪ ಕಾಲೀನ ಶರಣರನ್ನು ಕುರಿತು ಬರೆದ ಕಥೆಗಳನ್ನು ನೂತನರ ಕಥೆ ಅಥವಾ ರಗಳೆಗಳು ಎಂದು ಕರೆಯುತ್ತೇವೆ. ಇಲ್ಲಿ ಬಸವಣ್ಣ, ಅಲ್ಲಮ, ಅಕ್ಕಮಹಾದೇವಿ, ಕೊಂಡಗುಳಿ ಕೇಶಿರಾಜ ಮುಂತಾದ ಇಪ್ಪತ್ತೆಂಟು ಜನರ ಕಥೆಗಳಿವೆ. ಇವರೆಲ್ಲ ಕನ್ನಡನಾಡಿನವರು. ವಿವಿಧ ಕಾಯಕಗಳಲ್ಲಿ ತೊಡಗಿ ಸಾಮಾಜಿಕ ಚಳುವಳಿಯಲ್ಲಿ ಸಾಮೂಹಿಕವಾಗಿ ಪಾಲ್ಗೊಂಡವರು. ಸಾಮಾಜಿಕ ಅನಿಷ್ಟಗಳ ವಿರುದ್ಧ ಹೋರಾಡಿ ಸಾಮಾಜಿಕ ಸಮಾನತೆಯನ್ನು ಎತ್ತಿಹಿಡಿದವರು. ನುಡಿದಂತೆ ನಡೆದವರು. ಹಿಡಿದ ಕಾಯಕವನ್ನೇ ತಮ್ಮ ಆಧ್ಯಾತ್ಮ ಸಾಧನೆಯ ಮಾರ್ಗವನ್ನಾಗಿ ಮಾಡಿಕೊಂಡ ಸಾಧಕರು. ಅವರ ಬದುಕು-ಭಾವನೆ-ಸಾಧನೆಗಳ ಸಂಗಮವೇ ನೂತನ ರಗಳೆ. ಶರಣದ ಬದುಕನ್ನು ವೈಯಕ್ತಿಕವಾಗಿ ಬಹಳಷ್ಟು ಪ್ರೀತಿಸಿದ ಹರಿಹರ ಇತಿಹಾಸ, ಜನವದಂತಿ, ಪವಾಡ, ಕಲ್ಪನೆ, ಉತ್ಪ್ರೇಕ್ಷೆಗಳನ್ನು ಬಳಸಿಕೊಳ್ಳುವ ಮೂಲಕ ಅವರ ಕಥೆಗಳನ್ನು ಬರೆದಿದ್ದಾನೆ. ಅವುಗಳಲ್ಲಿ ಪ್ರಮುಖವಾದದು ಪ್ರಭುದೇವರ ರಗಳೆ. ಈ ಉದ್ದೇಶದಿಂದ ಈ ಅಧ್ಯಯನವನ್ನು ಕೈಗೊಳ್ಳಲಾಗಿದೆ.

ಹರಿಹರ ತನ್ನ ಕಥೆಗಳಿಗೆ ಆರಿಸಿಕೊಂಡ ವಸ್ತುಕಲ್ಪನೆಗಿಂತ ಹೆಚ್ಚಾಗಿ ವಾಸ್ತವಿಕ ಹಾಗೂ ಐತಿಹಾಸಿಕವಾದುದು. ಈ ಕಾವ್ಯದಲ್ಲಿ ಬರುವ ಪಾತ್ರಗಳು ಈ ನೆಲದ ಪಾತ್ರಗಳೇ ಆಗಿವೆ. ಇವರೆಲ್ಲರು ಹರಿಹರನು ಬದುಕಿದ್ದ ಕಾಲಕ್ಕೆ ಬಹಳ ಹತ್ತಿರದಲ್ಲಿದ್ದವರು. ಅತ್ಯಂತ ಪರಿಶುದ್ಧವಾಗಿ ಬದುಕಿದಂತವರು. ಅವರ ಬದುಕನ್ನೇ ಕವಿ ತನ್ನ ಕಥೆಗಳ ಮೂಲಕ ವಿವರವಾಗಿ ಚಿತ್ರಿಸಿದ್ದಾನೆ. ಹಾಗೇ ಚಿತ್ರಿಸುವಾಗ ಕಲ್ಪನೆಯನ್ನು ಜೊತೆಗೆ ಬಳಸಿಕೊಂಡಿದ್ದಾನೆ. ಸುಮಾರು ಇಪ್ಪತ್ತೆಂಟು ಶರಣರನ್ನು ನೂತನರು ಎಂದು ವಿದ್ವಾಂಸರು ಗುರುತಿಸಿದ್ದಾರೆ. ಇವರೆಲ್ಲ ಹೆಚ್ಚಾಗಿ ಕರ್ನಾಟಕದವರು. ಸುಮಾರು ಹನ್ನೆರಡನೆಯ ಶತಮಾನದ ಆಚೆ ಈಚೆಯಲ್ಲಿ ಬದುಕಿದ್ದವರು. ಹರಿಹರ ಕವಿ ಕೂಡ ಇದೇ ಶತಮಾನದ ಸಮೀಪದಲ್ಲಿ ಇದ್ದವನು. ಹಾಗಾಗಿ ಇವರನ್ನು ಹರಿಹರನ ಸಮೀಪಕಾಲೀನರು

ಎಂದು ನಿರ್ಧರಿಸಬಹುದು. ಈ ಸಮೀಪ ಕಾಲೀನರ ಸಾಲಿನಲ್ಲಿ ಅಲ್ಲಮಪ್ರಭು, ಬಸವಣ್ಣ, ಆದಯ್ಯ, ಅಕ್ಕಮಹಾದೇವಿ ಮುಂತಾದ ಶರಣ ಶರಣೆಯರು ಬರುತ್ತಾರೆ. ಇವರೆಲ್ಲ ಹರಿಹರನ ಬದುಕಿನ ಮೇಲೆ ಅತೀವ ಪ್ರಭಾವ ಬೀರಿದವರಾಗಿದ್ದು, ಇವರ ಬದುಕನ್ನು ಕುರಿತಂತೆ ಅವನು ತನ್ನ ದೃಷ್ಟಿಗೆ ತಕ್ಕುಹಾಗೆ ಕಾವ್ಯ ರಚಿಸಿದ್ದಾನೆ. ಈ ಕಥೆಯ ರಚನೆಯಲ್ಲಿ ಮುಖ್ಯವಾಗಿ ನಾನು 'ಪ್ರಭುದೇವರರಗಳೆ'ಯನ್ನು ಹರಿಹರನ ದೃಷ್ಟಿ ಏನು ಮತ್ತು ಅದು ಹೇಗೆ ಚಿತ್ರಿತವಾಗಿದೆ ಎಂಬುದನ್ನು ರಗಳೆಯ ವಿಶ್ಲೇಷಣೆಯ ಮೂಲಕ ಅರಿತುಕೊಳ್ಳುವ ಪ್ರಯತ್ನ ಮಾಡಿದ್ದೇನೆ. ಅಲ್ಲದೆ ಹರಿಹರನ 'ಪ್ರಭುದೇವರ ರಗಳೆ' ಮತ್ತು ಚಾಮರಸನ, ಪ್ರಭುಲಿಂಗಲೀಲೆಯನ್ನು ತೌಲನಿಕವಾಗಿ ಅಧ್ಯಯನಕ್ಕೆ ಒಳಪಡಿಸಲಾಗಿದೆ.

ಅಲ್ಲಮಪ್ರಭು ಹನ್ನೆರಡನೆಯ ಶತಮಾನದ ಶರಣರ ಸಾಧನೆಯ ಮಾರ್ಗಕ್ಕೆ ಪರಿಪೂರ್ಣತೆಯ ಸ್ವರೂಪವನ್ನು ಒದಗಿಸಿದವನು. ಶರಣ ಸಮೂಹಕ್ಕೆ ಗುರುಸಮನಾಗಿ ಪೂಜ್ಯನಾಗಿದ್ದವನು. ಅನುಭವ ಮಂಟಪದ ಅಗ್ರಗಣ್ಯನೂ ಆಗಿದ್ದವನು. ಇವನಿಗೆ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಅಲ್ಲಮ, ಅಲ್ಲಮಪ್ರಭು, ಅಲ್ಲಯ್ಯ ಪ್ರಭುದೇವ ಎಂಬ ಹಲವು ಹೆಸರಿಗಳಿಂದ ಕರೆಯಲಾಗಿದೆ. ಇವನನ್ನು ಕುರಿತಂತೆ ಕನ್ನಡದಲ್ಲಿ ಶಿವಗಣ ಪ್ರಸಾದಿ ಮಹದೇವಯ್ಯನವರ 'ಶೂನ್ಯಸಂಪಾದನೆ', 'ಪ್ರಭುಲಿಂಗಲೀಲೆ', 'ಪ್ರಭುದೇವರ ಪುರಾಣ' ಮುಂತಾದ ಕೃತಿಗಳು ರಚನೆಯಾಗಿವೆ. ಇವುಗಳ ಸಾಲಿನಲ್ಲಿ ಹರಿಹರ ಕವಿಯ 'ಪ್ರಭುದೇವರ ರಗಳೆ'ಯೂ ಒಂದು. ಇದು ಪ್ರಭುದೇವರನ್ನು ಕುರಿತಂತೆ ಕನ್ನಡದಲ್ಲಿ ರಚನೆಯಾದ ಮೊದಲಕೃತಿಯಾಗಿದೆ. ಇತರರ ಕೃತಿಗಳಿಗೆ ಹೋಲಿಸಿದರೆ ಹರಿಹರನ ಈ ರಗಳೆ ಬಹಳ ಚಿಕ್ಕದಾಗಿದೆ. ಕೇವಲ ಹದಿನೆಂಟು ಪುಟಗಳ ಒಂದೇ ಒಂದು ಸ್ಥಲದಲ್ಲಿ ಕವಿ ಪ್ರಭುದೇವರ ಕಥೆಯನ್ನು ನಿರೂಪಿಸಿದ್ದಾನೆ. ಎಷ್ಟೇ ಚಿಕ್ಕ ಕೃತಿಯಾದರೂ ಅಲ್ಲಮನ ಜೀವನದ ಚಿತ್ರವನ್ನು ನಿರೂಪಿಸುವ ಸಂದರ್ಭದಲ್ಲಿ ಈ ಕೃತಿಗೆ ಮಹತ್ವದ ಸ್ಥಾನವಿದೆ. ಒಂದೇ ಒಂದು ಸ್ಥಲದಲ್ಲಿಯೇ ಹರಿಹರನು ಅಲ್ಲಮನ ಅಸಾಧಾರಣ ಬದುಕನ್ನು ಚಿತ್ರಿಸಿದ್ದಾನೆ. ಅಲ್ಲಮನ ಕಥೆಯನ್ನು ಎರಡು ಹಂತಗಳಾಗಿ ಕಲ್ಪಿಸಿಕೊಂಡಿದ್ದಾನೆ. ಒಂದು ಅಲ್ಲಮನ ಹುಟ್ಟಿನಿಂದ ಕಾಮಲತೆಯ ಸಾವಿನವರೆಗಿನದು. ಎರಡನೆಯದು ಕಾಮಲತೆಯ ಸಾವು–ನಂತರ ಕೈಲಾಸ ಪದವಿ ಹೊಂದುವವರೆಗಿನದು.

ಚಾಮರಸನ 'ಪ್ರಭುಲಿಂಗಲೀಲೆ'ಯು ಕಥಾವ್ಯಾಪ್ತಿ ಹರಿಹರನ ರಗಳೆಗಿಂತ ವಿಸ್ತಾರವಾದುದಾಗಿದೆ. ಇಲ್ಲಿ ಬರುವ ಪಾತ್ರಗಳು ಕೂಡ ರಗಳೆಗೆ ಹೋಲಿಸಿದರೆ ಹೆಚ್ಚಿವೆ. ಸನ್ನಿವೇಶಗಳು ಕೂಡ ಸಾಕಷ್ಟು ವಿಸ್ತಾರವಾಗಿದ್ದು, ಸ್ವಾರಸ್ಯಕರವಾಗಿದೆ. ಹರಿಹರನ ರಗಳೆ 'ಚರಿತ್ರೆ'ಯ ರೂಪದಲ್ಲಿದ್ದರೆ ಚಾಮರಸನ ಕಾವ್ಯ 'ಪುರಾಣ'ದ ಸ್ವರೂಪ ಪಡೆದಿದೆ. ಆದುದರಿಂದ ಈ ಎರಡು ಕೃತಿಗಳನ್ನು ವಸ್ತು, ಸನ್ನಿವೇಶ, ಪಾತ್ರಚಿತ್ರಣ, ದರ್ಶನದ ಹಿನ್ನೆಲೆಯಲ್ಲಿ ಅಧ್ಯಯನ ಮಾಡುವುದು ಹೆಚ್ಚು ಪ್ರಯೋಜನಕಾರಿಯಾಗಿದೆ. ಇಂಥ ತೌಲನಿಕ ಅಧ್ಯಯನದಿಂದ ಹರಿಹರ ಕವಿ ಮತ್ತು ಚಾಮರಸ ಕವಿಯ ಮನೋಭಾವವನ್ನು ಅರಿಯಲು ಸಾಧ್ಯವಾಗುತ್ತದೆ. ಅಲ್ಲಮ ಪ್ರಭುವಿನ ವ್ಯಕ್ತಿತ್ವ ಹೇಗೆ ಕಾಲದಿಂದ ಕಾಲಕ್ಕೆ ಬದಲಾಗುತ್ತ ಬಂದು ಜನಸಾಮಾನ್ಯರ ದೃಷ್ಟಿಯಲ್ಲಿ ಆತ ಮನುಷ್ಯ ನೆಲೆಯಿಂದ ದೈವದ ನೆಲೆಗೆ ಏರಿದ್ದನ್ನು ಇಂಥ ಅಧ್ಯಯನದಿಂದ ಅರಿಯಬಹುದಾಗಿದೆ.

---

ಅಧ್ಯಾಯ - ೨

# ಅ) ಮಹಾಕವಿ ಹರಿಹರನ ಇತಿವೃತ್ತ

ವಚನ ಸಾಹಿತ್ಯಗಳ ಮಹಾಪೂರವು ಇಳಿದ ಮೇಲೆ ಅದರ ತಡಿಯಲ್ಲಿ ಕುಳಿತು ಭಕ್ತಚಿತ್ತದಿಂದ ಆ ಶರಣರ ದಿವ್ಯ ಜೀವನವನ್ನು ಬಿತ್ತರಿಸಿದ ಕವಿಗಳಲ್ಲಿ ಹರಿಹರನು ಪ್ರಾಯಶ: ಮೊದಲಿಗ. ಹರಿಹರ ಕವಿ ತಾನು ಹುಟ್ಟಿದ ಕಾಲವನ್ನಾಗಲಿ ತನ್ನ ಯಾವುದೇ ಕೃತಿ ರಚನೆಯ ಕಾಲವನ್ನಾಗಲಿ ಸೂಚಿಸಿಲ್ಲ. ಈ ಕಾರಣದಿಂದಾಗಿ ಈತನ ಕಾಲ ತುಂಬಾ ಚರ್ಚಾಸ್ಪದವಾಗಿದೆ. ವಿದ್ವಾಂಸರು ಕಾಲದಿಂದ ಕಾಲಕ್ಕೆ ವಿಭಿನ್ನ ಆಧಾರಗಳನ್ನು ಮಂಡಿಸುತ್ತಾರೆ.

ಕನ್ನಡದ ಗಣ್ಯ ಕವಿಗಳಲ್ಲೊಬ್ಬನಾದ ಹರಿಹರನ ಕಾಲವನ್ನು ಕ್ರಿ.ಶ. 13 ನೇ ಶತಮಾನದ ಪೂರ್ವಭಾಗವೆಂದು ತಿಳಿಯಲಾಗಿದೆ. ಇವನಿಗೆ ಹಂಪೆಯ ಹರಿಹರ, ಹರೀಶ್ವರ, ಹರಿಯಣ್ಣ ಎಂಬ ಹೆಸರುಗಳೂ ಇವೆ. ಈತನ ಜೀವನ ಕ್ಷೇತ್ರ ಮತ್ತು ಕಾರ್ಯರಚನೆಯ ಕ್ಷೇತ್ರ ಹಂಪೆ. ಹಂಪೆಯ ವಿರೂಪಾಕ್ಷನೇ ಈತನ ಇಷ್ಟದೈವ. ತನ್ನ ಎಲ್ಲ ಕೃತಿಗಳಲ್ಲಿಯೂ ವಿರೂಪಾಕ್ಷನ ಸ್ಮರಣೆ ಮಾಡಿದ್ದಾನೆ. ಹಂಪೆಯ ಮಾಯಿದೇವ ಈತನ ಗುರು. ಹೊಯ್ಸಳ ನರಸಿಂಹ ಬಲ್ಲಾಳನಲ್ಲಿ ಕೆಲವು ಕಾಲ ಕರಣಿಕ ವೃತ್ತಿಯಲ್ಲಿದ್ದನೆಂದೂ ನಂತರ ಹಂಪೆಗೆ ಹಿಂದಿರುಗಿ ಬಂದು ಅಲ್ಲಿ ವಿರೂಪಾಕ್ಷನ ಅರ್ಚನೆ ಮತ್ತು ಶಿವಭಕ್ತರ ಬಗೆಗಿನ ಕಾವ್ಯಗಳ ರಚನೆಯಲ್ಲಿ ನಿರತನಾದನೆಂದು ತಿಳಿದುಬರುತ್ತದೆ.

ಶಿವಭಕ್ತಿಯೇ ಹರಿಹರನ ಕಾವ್ಯಗಳ ಮೂಲ ನೆಲೆ. ಶಿವ ಪಾರ್ವತಿಯರ ವಿವಾಹ ಸಂದರ್ಭವನ್ನು ವಸ್ತುವಾಗುಳ್ಳ 'ಗಿರಿಜಾ ಕಲ್ಯಾಣ' ಇವನ ಚಂಪೂ ಕೃತಿ. ಶಿವಭಕ್ತರ ಜೀವನವನ್ನೂ ವಸ್ತುವಾಗಿರಿಸಿಕೊಂಡು ಇವನು ಅನೇಕ ರಗಳೆಗಳನ್ನು ಬರೆದಿದ್ದಾನೆ. ಅದುದರಿಂದ ಇವನಿಗೆ 'ರಗಳೆ ಕವಿ' ಎಂದು ಹೆಸರಿದೆ. ಅದುವರೆಗಿನ ಸಾಂಪ್ರದಾಯಿಕ ಕಾವ್ಯ ನಿರ್ಮಿತಿಯ ವಿಧಾನವನ್ನು ಬಿಟ್ಟು ರಗಳೆಯ ಹೊಸ ದಾರಿಯಲ್ಲಿ ನಡೆದುದರಿಂದ ಇವನಿಗೆ 'ಕ್ರಾಂತಿಕಾರಕ ಕವಿ'ಯೆಂದೂ ಹೆಸರು ಬಂದಿದೆ.

ಕಾವ್ಯದ ವಸ್ತು, ಭಾಷೆ, ರೂಪ ಮೂರರಲ್ಲೂ ಈತ ಬದಲಾವಣೆಯನ್ನು ತಂದವನಾದುದರಿಂದ ಈ ಹೆಸರು ಈತನಿಗೆ ಅನ್ವರ್ಥಕವಾಗಿದೆ. ತಮಿಳುನಾಡಿನಲ್ಲಿ ಆಗಿ ಹೋದ ಅನೇಕ ಶಿವಭಕ್ತರ ಬಗೆಗೆ ಈತನು ಬರೆದ ರಗಳೆಗಳನ್ನು ಪುರಾತನರ ರಗಳೆಗಳೆಂದೂ ಈತನ ಕಾಲಕ್ಕೆ ಸ್ವಲ್ಪ ಹಿಂದೆ ತಾನೆ ಆಗಿ ಹೋದ ಬಸವಣ್ಣ, ಪ್ರಭುದೇವ, ಅಕ್ಕಮಹಾದೇವಿ ಮೊದಲಾದವರ ಬಗೆಗೆ ಈತನು ಬರೆದ ರಗಳೆಗಳನ್ನು ನೂತನರ ರಗಳೆಗಳೆಂದು ಹೇಳುತ್ತಾರೆ. ಬಸವಣ್ಣ ಮತ್ತು ಆತನ ಸಮಕಾಲೀನರು ಮಾಡಿದ ಧಾರ್ಮಿಕ ಕ್ರಾಂತಿಯ ಅಂಶಗಳನ್ನು ನೇರವಾಗಿ ತನ್ನ ಕಾವ್ಯಗಳಲ್ಲಿ ಅಳವಡಿಸಿಕೊಂಡ ಮೊದಲ ಕವಿ ಹರಿಹರನೆಂದು ಹೇಳಬಹುದು. ಅವನು ಆಯ್ದುಕೊಂಡ 'ರಗಳೆ' ಎಂಬ ಬಂಧ ಅವನ ಕಾವ್ಯ ವಸ್ತುಗೆ ಹದವಾಗಿ ಹೊಂದಿ ನೂತನ ಮಾಧ್ಯಮವಾಯಿತು. ಹರಿಹರನು ರಗಳೆಗಳಲ್ಲದೆ, 'ಗಿರಿಜಾ ಕಲ್ಯಾಣ', 'ಪಂಪಾಶತಕ', 'ರಕ್ಷಾ ಶತಕ', 'ಮುಡಿಗೆಯ ಅಷ್ಟಕ' ಮುಂತಾದ ಕೃತಿಗಳನ್ನು ಬರೆದಿದ್ದಾನೆ. ಈತನ ಒಟ್ಟು ರಗಳೆಗಳ ಸಂಖ್ಯೆ 106 ಎಂದು

ಹೇಳಲಾಗುತ್ತದೆ.[7] ಕವಿ ರಾಘವಾಂಕನು ಹರಿಹರನ ಶಿಷ್ಯ ಮತ್ತು ಸೋದರಳಿಯನೂ ಆಗಿದ್ದ ಎನ್ನುವುದು ಕವಿ ಚರಿತ್ರೆಯಿಂದ ತಿಳಿಯುತ್ತದೆ.

ಹರಿಹರನ ಮನಸ್ಸು ಹಂಪೆಯ ವಿರೂಪಾಕ್ಷನನ್ನು ನೆನೆಯುತ್ತ ಶಿವನಿಗಾಗಿ ಆತನ ಆತ್ಮ ಹಂಬಲಿಸುತ್ತದೆ. ಹರನಿಗಿಂತ ಆತನ ಶರಣರು ದೊಡ್ಡವರೆಂದು ಆತನು ಅವರನ್ನು ಬಗೆ ಬಗೆಯಾಗಿ ಹಾಡಿರುವುದು ಆತನ ಶಿವಗಣದ ರಗಳೆಗಳನ್ನವಲೋಕಿಸಿದಾಗ ಮನದಟ್ಟಾಗುತ್ತದೆ. ಆತನ ಕೃತಿಗಳನ್ನು ತುಂಬು ಹೃದಯದಿಂದ ಓದಿದಾಗ ಹರಿಹರನು ಗಳಿಸಿಕೊಂಡ ಆತ್ಮೋನ್ನತಿಯನ್ನು ನಾವು ಸ್ಪಷ್ಟವಾಗಿ ಅರಿತುಕೊಳ್ಳಬಹುದು. 'ಶಿವಗಣದ ರಗಳೆಗಳು' ಹರಿಹರನ ವ್ಯಕ್ತಿತ್ವ ಸಿದ್ಧಿಯ ಪತಾಕೆಗಳು. ಅವುಗಳ ಎತ್ತರ ಸೊಬಗು ಬೇರೆಬೇರೆಯಾದರೂ ಒಂದೇ ವ್ಯಕ್ತಿತ್ವದ ಪರಿಪಾಕದಲ್ಲಿ ಅವುಗಳ ಮೂಲ ಆಧಾರವಿದೆ. ಅವುಗಳ ಕಥಾವಸ್ತು ಭಿನ್ನವಾದರು ಕಾವ್ಯ ರೂಪ, ವರ್ಣನೆ, ಶೈಲಿಗಳಲ್ಲಿ ಒಂದೇ ಪ್ರತಿಭೆಯ ಕೈವಾಡವಿದೆ. ಹರಿಹರನ ಕೃತಿಯೆಂದು ಹೆಸರು ಹೇಳದೆ ಸಹ ಗುರುತಿಸಲು ಬರುವಷ್ಟು ಅದು ನಿಚ್ಚಳವಾಗಿದೆ [8] ಎಂದು ಸ.ಸ. ಮಾಳವಾಡ ಅಭಿಪ್ರಾಯ ಪಟ್ಟಿದ್ದಾರೆ.

ಹರಿಹರನು ತನ್ನ ಆತ್ಮೋನ್ನತಿಯನ್ನು ಸಾಧಿಸಿಕೊಳ್ಳುವುದರ ಜೊತೆಗೆ ಅದನ್ನು ಸಾಧಿಸಿಕೊಂಡ ಶರಣರ ಕಥೆಗಳನ್ನು ರಗಳೆಯಲ್ಲಿ ಸರಸವಾಗಿ ಅರ್ಥವತ್ತಾಗಿ ಬಿತ್ತರಿಸಿದ್ದಾನೆ. ಭಕ್ತಿಯ ಆವೇಶದಲ್ಲಿ ಉಬ್ಬಿನವಿರೆದ್ದು ಕುಣಿಕುಣಿದು ಹರಿಹರನು ಶಿವಗಣದ ಚರಿತ್ರೆಯನ್ನು ಹೇಳುತ್ತಾನೆ. ಪ್ರಾರಂಭವಾದ ಕಥೆ ಮುಗಿಯುವರೆಗೂ ತಡೆಯಿಲ್ಲದೆ ಒಂದೇ ಸಮನೆ ಸಾಗುತ್ತದೆ. ಒಂದರ ನಂತರ ಇನ್ನೊಂದು ಕಥೆ ಕೇಳುವವರಿಗೆ ಬೇಸರವಾಗದಂತೆ ಮುಂದುವರಿಯುತ್ತದೆ. ಜನಸಾಮಾನ್ಯರ ಹಂಬಲವನ್ನು ಪೂರೈಸಲೆಂದು ಪ್ರಚೋದಿಸಲೆಂದು ಕಾವ್ಯಪ್ರೇಮಿಗಳ ಹೃದಯುವನ್ನು ಸೂರೆಗೊಳ್ಳಲೆಂದು, ಗಂಭೀರ ದರ್ಶನವನ್ನು ನಿರೀಕ್ಷಿಸುವವರಿಗೆ ಅರ್ಥಪೂರ್ಣವಾಗಲೆಂದು ಹರಿಹರನು ಅರವತ್ತು ಮೂವರ ರಗಳೆಗಳನ್ನು ರಚಿಸಿದ್ದಾರೆ. ಇದಕ್ಕೂ ಒಂದು ಹೆಜ್ಜೆ ಮುಂದುವರಿದು ಶರಣರು ನಡೆದಂತೆ ನುಡಿದರು. ಅಂತಹ ನಿಲುವು ನಮಗೆ ಜೀವನದ ತತ್ವ ಜ್ಞಾನದ ಮಾರ್ಗವನ್ನು ನಿರ್ದೇಶಿಸುತ್ತದೆ. ಇದಕ್ಕೆ ಆತ್ಮೋನ್ನತಿಯ ಬೆಳಕಾಗುತ್ತದೆ. ಹೀಗೆ ಅಂದು ಆಚರಿಸಿ ಅನುಭವಿಗಳಾಗಿ ಹೋದ ಶಿವಶರಣರ ಚರಿತ್ರೆಗಳನ್ನು ರಗಳೆಗಳಲ್ಲಿ ಹರಿಹರ ಕವಿಯು ಬರೆದು ತನ್ನ ಆತ್ಮೋನ್ನತಿಯನ್ನು ಸಾಧಿಸಿಕೊಂಡಿದ್ದಾನೆ. ಇತರರ ಆತ್ಮೋನ್ನತಿಗೆ ದಾರಿ ತೋರಿಸಿದ್ದಾನೆ. ಪ್ರಭುದೇವರ ರಗಳೆಗಳಲ್ಲಿ

ನಡೆದುದೇ ಬಟ್ಟೆಯಾದುದು ಶಿವನ ಮದಕರಿಕೆ
ನುಡಿದುದೇ ವೇದವಾದುದು ಲಿಂಗವಂತರಿಗೆ [9]

ಎಂದು ಹೇಳುವ ಮಾತಿನಲ್ಲಿ ಶರಣರ ಆತ್ಮೋನ್ನತಿಯ ಉನ್ನತ ಮಟ್ಟವನ್ನು ಮಾರ್ಮಿಕವಾಗಿ ಹರಿಹರನು ವರ್ಣಿಸಿದ್ದಾನೆ. ಆತನ ಆತ್ಮವು ಭಕ್ತಿ ರಸದಲ್ಲಿ ಮಿಂದು 'ತೂಗಾದುತೇಲೆ ದಾಡುತಾಹಾ ವಿರೂಪಾಕ್ಷ' ಎಂದು ನಲಿನಲಿದು ಕುಣಿಕುಣಿದು ದೇವನನ್ನೂ ನೆನೆಯುತ್ತದೆ. "ಉರವಣಿಪ ಪರಮ ಭಕುತಿಯ ಸೊಕ್ಕು ತಲೆಗೇರಿ ತೆನೆಗದ್ಗದವುಮುಣ್ಮಿ ಪೊಣ್ಮಿಕರಗುತೆ ನಿಂದು ಇಲ್ಲಿ ಜಗಕ್ಕೆ ಪೂಜಿತರುಂ ಅಲ್ಲಿ ಪರಕ್ಕೆ ವಿಶೇಷ ಪೂಜಿತರ ಇಂತು

ಇಲ್ಲಿಯುಂ" ಅಲ್ಲಿಯು ಮೆರೆವ ಶಿವಶರಣರ ಜೀವನ ಹಾಗೂ ಸಿದ್ಧಿಗಳು ಈ ರಗಳೆಗಳಿಗೆ ವಸ್ತುವನ್ನು ಒದಗಿಸಿವೆ. ಹರಿಹರನು ರಗಳೆಗಳಲ್ಲಿ ತನ್ನದೇ ಆದ ಒಂದು ಪ್ರಪಂಚವನ್ನೇ ನಿರ್ಮಿಸಿದ್ದಾನೆ. ಆ ಪ್ರಪಂಚದಲ್ಲಿ ವಿವಿಧ ವೃತ್ತಿಯನ್ನು ಅವಲಂಬಿಸಿದವರಿದ್ದಾರೆ. ಸ್ಥಾನಮಾನಗಳ ವ್ಯತ್ಯಾಸದಂತೆ ಅವರ ಮನೋಭಾವಗಳೂ ಭಿನ್ನವಾಗಿವೆ. ಅಭಿರುಚಿಗಳು ಬೇರೆ ಬೇರೆ ಇರುವುದಂತೂ ಸರಿಯೇ ಸರಿ.

ಮಾನವ ಸ್ವಭಾವದ ವೈಲಕ್ಷಣದ ವಿವಿಧ ಪರಿಗಳನ್ನು ನಾವು ಹರಿಹರನ ರಗಳೆಗಳಲ್ಲಿ ಕಾಣುತ್ತೇವೆ. ಶ್ರೇಷ್ಠ ಶಿವಾನುಭಾವಿ ಅಲ್ಲಮ, ಬಸವಣ್ಣ ಹಾಗೂ ಇನ್ನಿತರ ಶಿವಶರಣರ ಪ್ರಭಾವದಿಂದ ಪ್ರೇರಿತನಾದ ಹರಿಹರನು ಉತ್ಕಟವಾದ ಅನುಭಾವದ ದೃಷ್ಟಿಯನ್ನಿಟ್ಟುಕೊಂಡು ವ್ಯಾಪಕವಾದ ಪ್ರಪಂಚವನ್ನು ನಿರ್ಮಿಸಿದ್ದಾನೆ. ಹರಿಹರನು ನಿರ್ಮಿಸಿದ ವ್ಯಾಪಕವಾದ ಪ್ರಪಂಚವನ್ನೆಲ್ಲ ಈ ಅಧ್ಯಯನದ ಪರಿಮಿತಿಯಲ್ಲಿ ಅಳವಡಿಸುವುದು ಸಾಧ್ಯವಿಲ್ಲ. ಅದ್ದರಿಂದ ಈ ಭಾಗದಲ್ಲಿ 'ಪ್ರಭುದೇವರ ರಗಳೆ' ಮತ್ತು ಚಾಮರಸನ 'ಪ್ರಭುಲಿಂಗಲೀಲೆ' ಕೃತಿಗಳನ್ನು ತೌಲನಿಕವಾಗಿ ಅಭ್ಯಾಸ ಮಾಡಲಾಗಿದೆ. ಈ ರೀತಿಯ ಅಧ್ಯಯನದಿಂದ ಹರಿಹರ ಕವಿಯ ಮತ್ತು ಚಾಮರಸ ಕವಿಯ ಪ್ರತಿಭೆ, ವರ್ಣನೆಯ ಕೌಶಲ್ಯ, ಮಾತಿನ ಸೊಗಸು, ಭಕ್ತಿಯ ತನ್ಮಯತೆ ಇವುಗಳನ್ನು ನಾವು ಕಂಡುಕೊಳ್ಳಬಹುದು. ಅಲ್ಲದೆ ಹರಿಹರ ಕವಿಯು ಜೀವನದ ಬಗೆಗೆ ಇಟ್ಟುಕೊಂಡ ದೃಷ್ಟಿ ಆ ಮೂಲಕ ನಮಗೆ ದೊರೆಯುವ ದರ್ಶನವನ್ನು ಅರಿತುಕೊಳ್ಳಬಹುದು.

ಹರಿಹರನ ಶಿವಗಣ ಪ್ರಪಂಚವು ವ್ಯಾಪಕ ಮತ್ತು ವೈವಿಧ್ಯಮಯವಾಗಿದೆ. ಈ ಪ್ರಪಂಚದಲ್ಲಿ ಮಾನವೀಯ ಅಂತಸ್ತಿನ ಜೀವನದಲ್ಲಿಯೇ ದೈವೀ ಸಾಹಸಗಳನ್ನು ಕೈಕೊಂಡು ಸಫಲರಾದ ದೈವೀ ಮಾರ್ಗದ ಸಾಧಕರಿದ್ದಾರೆ. ಮುಗ್ಧ ಭಕ್ತಿಯಿಂದ ಅಸಾಮಾನ್ಯ ಕಾರ್ಯದಲ್ಲಿ ತೊಡಗಿ ಕೃತ ಕೃತ್ಯರಾದ ಶಿವಶರಣರ ಜೀವನವನ್ನು ತನ್ನ ಕಥನ ಮಾರ್ಗಕ್ಕೆ ಯಾವುದೇ ಕೀಳರಿಮೆಯಿಲ್ಲದೆ ಬಳಸಿಕೊಂಡಿದ್ದಾನೆ. ಇದು ಚಾರಿತ್ರಿಕ ದೃಷ್ಠಿಯಿಂದ ಮಹತ್ವವಾಗಿದೆ. ಹರಿಹರನದು ಮುಖ್ಯವಾಗಿ ಭಕ್ತನ ವ್ಯಕ್ತಿತ್ವ, ಯೋಗಿಯ ವ್ಯಕ್ತಿತ್ವ. ಅವನು ಸಂಸಾರದಲ್ಲಿದ್ದಾಗಲೂ ಶಂಕರಾ ಶಶಿಧರಾ ಎಂದೇ ಧ್ಯಾನಮಾಡುತ್ತ ಆದಷ್ಟು ಬೇಗ ಆದರಿಂದ ಮುಕ್ತಿ ಪಡೆಯಬೇಕೆಂದು ಹಂಬಲಿಸಿದವನು. ಅವನ ವಿರಕ್ತ ಜೀವನದ ಪ್ರಖರತೆಯೇ ನಮ್ಮನ್ನು ಅವನು ಸಂಸಾರಿಯಾಗಿದ್ದನೆಂದು ಊಹಿಸಲೂ ಬಿಡದಿರುವುದು. ಕವಿಯು ತನ್ನನ್ನು 'ಶಿವಕವಿ', 'ವಿರೂಪಾಕ್ಷ', 'ಸಾಕ್ಷಾತ್ಸುಪುತ್ರ' ಎಂದು ಕರೆದುಕೊಂಡಿದ್ದಾನೆ. (ಗಿರಿಜಾ ಕಲ್ಯಾಣ 1–33) ರಾಘವಾಂಕನಾದರೂ ಹರಿಹರನ ಮೂರ್ತಿಯನ್ನು ವರ್ಣಿಸುವಲ್ಲಿ ಗುರುಭಕ್ತಿ, ತ್ಯಾಗ, ಜ್ಞಾನ, ದಯೆ, ಶಮೆ, ಶಾಂತಿ, ಸತ್ಯ, ನಿಷ್ಠೆ ವೊದಲಾದ ಗುಣಗಳೇ ರೂಪುಗೊಂಡಂತಿದ್ದುವು (ಹರಿಶ್ಚಂದ್ರ ಕಾವ್ಯ 1–12) ಎಂದಿದ್ದಾನೆ. ಈ ಮೇಲಿನ ಮಾತುಗಳು ಕವಿಯ ವ್ಯಕ್ತಿತ್ವದ ಮೇಲೆ ಬೆಳಕುಚೆಲ್ಲುವ ಕೆಲವು ಅಂಶಗಳಾಗಿವೆ. ಕವಿಯು ತನ್ನ ಕಾವ್ಯದ ಬಗ್ಗೆ ವಿಶೇಷವಾದ ಅಭಿಯಾನವುಳ್ಳವನಾಗಿದ್ದಾನೆ. ನವರಸಗಳಿಂದಲೂ, ಉನ್ನತಭಾವಗಳಿಂದಲೂ, ನವೀನ ಶಬ್ಧರ್ಥಗಳಿಂದಲೂ ಈ ಕೃತಿ ಶೋಭಿಸುತ್ತದೆ. ಹರಿಹರನದು ಸ್ವತಂತ್ರ ಮನೋಧರ್ಮ, ಹೊಸಜಾಡನ್ನು ಹಿಡಿದು ನಡೆಯುವುದು ಅವನ ಅಗ್ಗಳಿಕೆ. ಕಾವ್ಯ ವಸ್ತು ಕಾವ್ಯೋದ್ದೇಶ, ಭಾಷೆ, ಛಂದಸ್ಸು, ವೊದಲಾದ ಅಂಶಗಳಲ್ಲಿ ಅವನು ತನ್ನ ವ್ಯಕ್ತಿತ್ವದ ಮುದ್ರೆಯನ್ನೊತ್ತಿದ್ದಾನೆ. ಜೈನ ಕವಿಗಳಿಗೆ ಪಂಪನು ಹೇಗೋ ಹಾಗೆಯೇ ಹರಿಹರನು ವೀರಶೈವ ಕವಿಗಳಿಗೆ ಪೂಜ್ಯನಾಗಿದ್ದಾನೆ. ಆದ ಕಾರಣ ಎಂಬತ್ತು ಮಂದಿ ಕವಿಗಳು

ಈತನನ್ನು ಸ್ಮರಿಸಿದ್ದಾರೆ. ಈತನ ಸಮಕಾಲೀನನಾದ ರಾಘವಾಂಕನು ಹರೀಶ್ವರನ ದಿವ್ಯಮೂರ್ತಿ ತನ್ನ ಚಿತ್ತದೊಳಗೆ ನೆಲಸಿರಲಿ ಎಂದು ಬೇಡಿಕೊಂಡಿರುವನಲ್ಲದೆ, ತನ್ನನ್ನು 'ಹಂಪೆಯ ಹರೀಶ್ವರನ ವರಸುತ' ಎಂದು ಅಭಿಮಾನದಿಂದ ಹೇಳಿಕೊಂಡಿದ್ದಾನೆ.

ಹರಿಹರನು ತನ್ನ ರಗಳೆಗಳಲ್ಲಿ ವಿವಿಧ ಮುಖಗಳಿಗೆ, ವಿಭಿನ್ನ ರಸಗಳ ಉದ್ಬೋಧನಗಳಿಗೆ ಹೆಚ್ಚು ಒತ್ತು ನೀಡಿಲ್ಲ. ಅದಕ್ಕೆ ಹರಿಹರನ ಕಾವ್ಯ ದೃಷ್ಟಿಯೇ ಕಾರಣ. ಭಕ್ತಿಯಲ್ಲದೆ ಬೇರೆಯಾವುದು ಅವನಿಗೆ ಅನಗತ್ಯ, ಗೌಣ, ಅದೇ ಅವನಿಗೊಂದು ಮಿತಿಯಾಗಿಯೂ ಪರಿಣಮಿಸಿದೆ.

"ಮನುಜರ ಮೇಲೆ ಸಾವವರ ಮೇಲೆ ಕನಿಷ್ಠರ ಮೇಲೆಯಕ್ಕಟಾ
ತನತನಗಿಂದ್ರ ಚಂದ್ರ ರವಿ ಕರ್ಣದಧೀಚಿ ಬಲೀಂದ್ರನೆಂದು ಮೇಣ್
ಅನವರತಂ ಪೊಗಳ್ದು ಕೆಡಬೇಡಲೇ ಮಾನವ ನೀನಹರ್ನಿಶಂ
ನನೆಪೊಗಳರ್ಚಿಸೆಮ್ಮ ಕಡುಸೊಂಪಿನ ಪೆಂಪಿನ ಹಂಪೆಯಾಳ್ದನಂ" ೪

ಎಂಬುದು ಹರಿಹರನ ಮನೋಧರ್ಮ. ಇವನ ಶತಕಗಳು ಮತ್ತು ಅಷ್ಟಕಗಳು ಈ ಪ್ರವೃತ್ತಿಗೆ ಅನುಗುಣವಾಗಿ ರಚನೆಯಾಗಿರುವ ಸುಂದರ ಕೃತಿಗಳು.

ಹರಿಹರನ ರಗಳೆಗಳ ಸಂಖ್ಯಾ ನಿರ್ಣಯ ಮಾಡುವಾಗ, ಹರಿಹರನವೇ ಎಂದು ಹೇಳಬಹುದಾದ ರಗಳೆಗಳು 61 ಎಂಬುದಾಗಿ ಕೆಲವು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಆದರೆ ಆ ವಿಷಯದಲ್ಲಿ ಸರ್ವ ಸಮ್ಮತವಾದ ಅಂತಿಮ ನಿರ್ಣಯ ಇನ್ನು ಸಾಧ್ಯವಾಗಿಲ್ಲ. ಕೆಲವರೆನ್ನುವಂತೆ ನೂರಾರು ರಗಳೆಗಳನ್ನು ಹರಿಹರ ಬರೆದಿದ್ದಾನೆ. ಮುಂದಿನ ಸಂಶೋಧನೆಗಳಿಂದ ಈ ನಿರ್ಣಯ ಬದಲಾದರೆ ಅಷ್ಟರ ಮಟ್ಟಿಗೆ ಈ ವಿವೇಚನೆಯಲ್ಲೂ ಮಾರ್ಪಾಟಾಗಬಹುದು. ಹರಿಹರನು ರಚಿಸಿದ ರಗಳೆಗಳ ಸಂಖ್ಯೆಯ ನಿರ್ಧಾರವು ಕನ್ನಡ ಸಾಹಿತ್ಯದ ಪ್ರೌಢವ್ಯಾಸಂಗವನ್ನು ಕೈಗೊಂಡವರಿಗೆ ಒಂದು ಸಮಸ್ಯೆಯಾಗಿ ಪರಿಣಮಿಸಿದೆ. ಹರಿಹರನು ತನ್ನ ಲಿಂಗಾರ್ಚನೆಯ ರಗಳೆಯಲ್ಲಿ:

'ನಚ್ಚಿನರುವತ್ತು ಮೂವರ ಸಂಖ್ಯಾತರಂ
ಅಚ್ಚರಿಯೊಳೆಸೆವ ಭಕ್ತಾಂಗನೆಯರೆಲ್ಲರಂ
ಭಕ್ತಿಯಿಂದಿಂತು' ೫

ಪಾಡಿದೆನೆಂದು ಹೇಳುತ್ತಾನೆ. ಇಲ್ಲಿ 'ಅಸಂಖ್ಯಾತರಂ' ಎಂಬ ಪದವು ಬಸವಣ್ಣನವರ ಕಾಲದ ಸಾವಿರಾರು ಶರಣರ ಚರಿತ್ರೆಗಳನ್ನು ಬರೆಯುವ ಮಹಾಯೋಜನೆಯನ್ನು ಹರಿಹರನು ಕೈಗೊಂಡಿರಬೇಕೆಂಬುದನ್ನು ಸ್ಪಷ್ಟಗೊಳಿಸುತ್ತಿದೆ. ಹರಿಹರನ ರಗಳೆಗಳ ಎಂಟುಮಾತೃಕೆಗಳು ಈಗ ದೊರೆತಿವೆ. ಈ ಎಲ್ಲಾ ಮಾತೃಕೆಗಳಲ್ಲಿ ಒಟ್ಟು 154 ರಗಳೆಗಳಿವೆ. ಹೀಗೆ ದೊರೆಯುವ ಈ 154 ರಗಳೆಗಳೆಲ್ಲವೂ ಹರಿಹರಕೃತವಾಗಿರಲಾರವು. ಈ ರಗಳೆಗಳನ್ನೆಲ್ಲ ವಿವರವಾಗಿ ಅಭ್ಯಾಸಮಾಡಿ ನೋಡಿದಾಗ ಕೆಲವು ರಗಳೆಗಳು ಹರಿಹರನವಲ್ಲವೆಂದು ಸಿದ್ಧವಾಗುತ್ತಿದೆ. ಭಾಷೆ, ಶೈಲಿ ಮತ್ತು ಕಥಾ ರಚನೆ ಇವುಗಳ ದೃಷ್ಟಿಯಿಂದ ಕೆಲವು ರಗಳೆಗಳು ಹರಿಹರನ ಕೃತಿಗಳ

---

ತೂಕಕ್ಕೆ ಬರುವುದಿಲ್ಲ. ಭಿನ್ನ ಕವಿಕೃತ ರಗಳೆಗಳು ಪ್ರತಿ ಮಾಡುವವರ ತಪ್ಪು ಕಲ್ಪನೆಯಿಂದ ಈ ಕಟ್ಟುಗಳಲ್ಲಿ ಸೇರಿರಬೇಕು. ಒಮ್ಮೊಮ್ಮೆ ರಗಳೆಯನ್ನು ಬರೆದ ಕವಿಯ ಉಲ್ಲೇಖವಿಲ್ಲದಾಗ ರಗಳೆಗಳನ್ನು ಬರೆದು ಪ್ರಸಿದ್ಧಿಯನ್ನು ಪಡೆದ ಹರಿಹರನಿಗೆ ಈ ರಗಳೆಯ ಕರ್ತೃವೆಂದು ನಿರ್ದೇಶಿಸಿ ಪ್ರತಿ ಮಾಡಿರಬಹುದೆಂದು ಊಹಿಸಲೂ ಸಾಧ್ಯವಿದೆ. ಈ ವಿಚಾರವನ್ನು ಹಿನ್ನಲೆಯಾಗಿಟ್ಟುಕೊಂಡು ಎಲ್ಲ ರಗಳೆಗಳನ್ನು ಕೂಲಂಕಷವಾಗಿ ಅಭ್ಯಾಸ ಮಾಡಿ ಕೇವಲ 106 ರಗಳೆಗಳನ್ನು ಹರಿಹರನು ಬರೆದನೆಂಬ ನಿರ್ಧಾರವೊಂದು ಈಗ ಅಭ್ಯಾಸಿಗಳ ಮುಂದೆ ಬಂದಿದೆ. ಈ ವಿಷಯದಲ್ಲಿ ಸಂಶೋಧನೆ ಕೈಗೊಂಡಿದ್ದ ಡಾ|| ಕೆ. ಈಶ್ವರನ್ ಅವರು 'ಹರಿಹರನ ಕೃತಿಗಳ ಸಂಖ್ಯಾ ನಿರ್ಣಯ' ಎಂಬ ಮಹಾ ಪ್ರಬಂಧವನ್ನು ರಚಿಸಿದ್ದಾರೆ. ಈ ಮಹಾ ಪ್ರಬಂಧದಲ್ಲಿ ಹರಿಹರನ ರಗಳೆಗಳ ಸಂಖ್ಯಾ ನಿರ್ಣಯದ ವಿವರಗಳನ್ನು ಕೂಲಂಕಷವಾಗಿ ಚರ್ಚಿಸಲಾಗಿದೆ. ಆದರಲ್ಲಿ ಹರಿಹರಕೃತ ರಗಳೆಗಳ ಸಂಖ್ಯೆ 106 ಎಂದು ನಿರ್ಧರಿಸಲಾಗಿದೆ. ಅವುಗಳ ಪಟ್ಟಿಯನ್ನು ಮುಂದೆ ಕೊಡಲಾಗಿದೆ.

ಹರಿಹರನ ರಗಳೆಗಳು :

ಪುರಾತನರ ರಗಳೆಗಳು

1. ಅತಿಭಕ್ತ
2. ಅಮರ ನೀತಿ
3. ಅಯ್ಯಡಿ
4. ಅರಿವಾಳ್ತಾಂಡ
5. ಅ:ಪೋತಿ
6. ಅನಾಯನಾರ
7. ಇರಿಭಕ್ತ
8. ಇಹ:ಪಗೆಯಾಂಡ
9. ಇಳೆಯಾಂಡ ಗುಡಿಮಾರ
10. ಎಡೆಗಣೆಯ ಪೆರುಮಾಳೆ
11. ಏಣಾಧಿನಾಥ
12. ಒಲಘಾಂಡ ಮೂರ್ತಿ
13. ಕಡೆವೂರ ಕಾರಿ
14. ಕಣ್ಣಪ್ಪ
15. ಕಲಿಕಂಪ
16. ಕಲಿಕಾಮದೇವ
17. ಕಲಿಯ ನಾಯ್ಯರ
18. ಕಳೆಚಂಗ ಚೋಳ
19. ಕಳೆಚಂಗ ಪೆರುಮಾಳ
20. ಕಾರಿಕಾಲಮ್ಮೆ
21. ಕುಲಚ್ಚರಿ
22. ಕೊಂಗುಲಿಯ ಕಲಿಯ
23. ಕೊಲ್ಲುಲಿ
24. ಗಣನಾಥದೇವ
25. ಚಂಡೇಶಪಿಳ್ಳೆ
26. ಕಣಂಬುಲ್ಲನಂಬಿ
27. ಚೇರು ತೊಣೆಯಾಂಡ
28. ಚೇರಮ
29. ಜಡೆಯ ನಾಯನಾರ, ಸುಜ್ಞಾನಿದೇವಿ
30. ತಿರುನೀಲಕಂಠ
31. ತಿರುನೀಲಕಂಠಪಾಣ
32. ತಿರುನೀಲನಕ್ಕ
33. ತಿರುಕುರುಂಡೆಯ ತೊಂಡ
34. ತಿರುನಾಳ್ರೋವ
35. ತಿರುಮೂಲದೇವ
36. ನಂಬಿಯಣ್ಣ
37. ನಮ:ಶಿವಾಯ ಮುರಘ
38. ನಮಿನಂದಿ
39. ನರಸಿಂಗಮುನಿ
40. ನಿಡುಮಾರದೇವ
41. ನೈಶ
42. ಪೊಗಲ್ತೊಣೆಯಾಂಡ

43. ಪಾಂಡ್ಯ ಮಹಾದೇವಿ
44. ಪೂಸಲೆಯಾಂಡ
45. ಪೆರುಮಳಲಿಯ ಕುರುಂಬ
46. ಮಾನಕಂಜಾರ
47. ಮೆರೆಮಿಂಡದೇವ
48. ಮೊನಿಇಡವ
49. ರುದ್ರ ಪಶುಪತಿ
50. ವರದಂಡಿಭಕ್ತ
51. ವರಕೃತಾಂಶ
52. ವರಶಕ್ತಿಯಾರ
53. ವಾಗೀಶ್ವರ
54. ವಾಯಿಲಾರ
55. ಸಾಂಖ್ಯತೊಂಡ
56. ಸಿರಿಯಾಳ
57. ಸೇದಿರಾಜ
58. ಸೋಮಾಸೀಮಾರ
59. ಚೆನ್ನಯ್ಯ ಮಾದರ
60. ನಂಬಿಯಕ್ಕ

ತಮಿಳುನಾಡಿನ ಇತರ ಶರಣರ ರಗಳೆಗಳು

62. ತಿಲ್ಲೈವೇಳಾಂಧರು
63. ಪೊಯ್ಯಡಿ
64. ಮನುಚೋಳ

ಕೈಲಾಸದಲ್ಲಿ ನಡೆದ ಕಥೆಯ ರಗಳೆಗಳು

65. ದಕ್ಷಧ್ವರ
66. ಭೃಂಗಿ

ನೂತನ ಶರಣರ ರಗಳೆಗಳು

67. ಅಮ್ಮವ್ವೆ
68. ಆದಯ್ಯ
69. ಉದ್ಭಟ
70. ಏಕಾಂತ ರಾಮಿತಂದೆ
71. ಓಹಿಲಯ್ಯ
72. ಕುಂಬಾರ ಗುಂಡಯ್ಯ
73. ಕೆಂಭಾವಿ ಭೋಗಣ್ಣ
74. ಕೇಶಿರಾಜ ದಣ್ಣಾಯಕ
75. ಕೋವೂರ ಬೊಮ್ಮಯ್ಯ
76. ಕೋಳೂರ ಕೊಡಗೂಸು
77. ತೆಲುಗು ಬೊಮ್ಮಣ್ಣ
78. ಪ್ರಭುದೇವ
79. ಬಸವೇಶ್ವರ
80. ಬಾಣ
81.ಬಾಹೂರಬೊವ ್ಮಯ್ಯ
82. ಮಾಸೂಟಿ ಚೌಡಯ್ಯ
83. ರೇವಣ್ಣಸಿದ್ಧ
84. ವೈಜಕವ್ವೆ
85. ಮಲುಹಣ
86. ಮಹದೇವಿಯಕ್ಕ
87. ಮಳೆಯ ದೇವರಾಜ
88. ಮಾರುಡಗಿನಾಚಿತಂದೆ
89. ಶಂಕರ ದಾಸಿಮಯ್ಯ
90. ಸಾಮವೇದಿ
91. ಸುರಗಿ ಚೋಳಯ್ಯ
92. ಹಲಾಯುಧ
93. ಹಾವಿನ ಹಾಳ ಕಲ್ಲಯ್ಯ
94. ಹೇರೂರ ಹೆಣ್ಣು

---

ಸಂಕೀರ್ಣ ರಗಳೆಗಳು

ಅ) ವ್ಯಕ್ತಿ ನಿಷ್ಠ ರಗಳೆಗಳು

95. ಪಿಡೋತ್ಪತ್ತಿ  96. ಪುಷ್ಪ

97. ಲಿಂಗಾರ್ಚನ  98. ಹಂಪೆಯರಸ

ಆ) ವಸ್ತು ನಿಷ್ಠ ರಗಳೆಗಳು

99. ಗುಣಸ್ತೋತ್ರ  100. ಜಯ

101. ನಮ:ಶಿವಾಯ  102. ಪಂಚಾಕ್ಷರಿ

103. ಪಂಪಾಕ್ಷೇತ್ರ  104. ಮಹಿಮಾ

105. ರುದ್ರಾಕ್ಷಿ  106. ವಿಭೂತಿ

ಹರಿಹರನವೆಂದು ಒಪ್ಪಿಕೊಂಡಿರುವ 106 ರಗಳೆಗಳನ್ನು ಕೆಳಗಿನಂತೆ ವಿಭಾಗಿಸಲಾಗಿದೆ.

| | |
|---|---|
| 1. ಪುರಾತನ ರಗಳೆಗಳು | – 61 |
| 2. ತಮಿಳುನಾಡಿನ ಇತರ ಶರಣರ ರಗಳೆಗಳು | – 3 |
| 3. ನೂತನರ ರಗಳೆಗಳು | – 28 |
| 4. ಕೈಲಾಸದಲ್ಲಿ ನಡೆದ ಕಥೆಯ ರಗಳೆಗಳು | – 2 |
| 5. ಸಂಕೀರ್ಣ ರಗಳೆಗಳು | |
| ವಸ್ತು ನಿಷ್ಠ ರಗಳೆಗಳು | – 4 |
| ವ್ಯಕ್ತಿ ನಿಷ್ಠ ರಗಳೆಗಳು | – 8 |
| | 106 [೬] |

ಈ ನೂರಾರು ರಗಳೆಗಳಲ್ಲಿ ಪುರಾತನ ರಗಳೆಗಳ ಸಂಖ್ಯೆಯೇ ದೊಡ್ಡದಾಗಿದೆ. ಅಸಂಖ್ಯಾಂತರ ರಗಳೆಗಳ ರಚನೆಯನ್ನು ಹಮ್ಮಿಕೊಂಡ ಹರಿಹರನಿಗೆ ಅದರಲ್ಲಿ ಕೆಲವು ರಗಳೆಗಳನ್ನು ಮಾತ್ರ ರಚಿಸಲು ಸಾಧ್ಯವಾಗಿರಬೇಕು. ಆತನು ಕೈಗೊಂಡಿದ್ದ ಮಹಾಯೋಜನೆ ಪೂರ್ತಿಯಾಗದೆ ಉಳಿಯಿತೆಂದು ಊಹಿಸಬಹುದಾಗಿದೆ.

ಗಿರಿಜಾ ಕಲ್ಯಾಣ:

ಹರಿಹರ ಚಂಪೂ ಛಂದಸ್ಸಿನಲ್ಲಿ ಬರೆದ ಮಹಾಕಾವ್ಯ 'ಗಿರಿಜಾ ಕಲ್ಯಾಣ'ವಾಗಿದೆ. ಗಿರಿಜಾ ಕಲ್ಯಾಣ ಕೃತಿಯು ಗಿರಿಜೆಯ ಜನನ, ಬಾಲ್ಯ, ಯೌವ್ವನಗಳಿಂದ ಮೆರೆವ ಆಕೆಯ ಹಾಗೂ ಶಿವನ ಕಲ್ಯಾಣದಲ್ಲಿ ಮಂಗಳಗೊಳ್ಳುವುದು. ಇದರಲ್ಲಿ ಮುಖ್ಯವಾಗಿ ಗಮನವನ್ನು ಸೆಳೆಯುವಂತಹ ಸಂಗತಿ ಎಂದರೆ ಗಿರಿಜೆ ದೈವಸಂಭೂತೆಯಾಗಿದ್ದರೂ ಮಾನವ ಸಹಜವಾದ ಅನೇಕ ಗುಣಗಳನ್ನು ಹೊಂದಿದ್ದುದು. ಇದು ಪ್ರೌಢಕಾವ್ಯಗಳ ಸಾಲಲ್ಲಿ ಸೇರಿ ಬೆಳಗುತ್ತಿದ್ದಾಗ್ಯೂ ಕೂಡ ಹರಿಹರನ ಕಥನಶೈಲಿಯ ಪರಿಚಯ, ದರ್ಶನ ಉಂಟಾಗದಿರದು. ಕಥಾವಸ್ತು ಪುರಾಣಕ್ಕೆ ಸಂಬಂಧಪಟ್ಟಿದೆ. ಇತರೆ ಕವಿಪುಂಗವರೂ ಅದನ್ನು ಸ್ವೀಕರಿಸಿ, ಆಯ್ದು, ಒಡಂಬಡಿಸಿ ತಮ್ಮದೇ ಆದ ಶೈಲಿಗಳಲ್ಲಿ ಶ್ರೇಷ್ಠ ಕೃತಿಗಳನ್ನು ರಚಿಸಿ ಕೀರ್ತಿಪತಾಕೆಯನ್ನು ಹಾರಿಸಿದ್ದಾರೆ. ಹರಿಹರನು ಇದೇ ಕಥೆಯನ್ನು ತೆಗೆದುಕೊಂಡು ಅಲ್ಲಲ್ಲಿ ಅಲ್ಪ ವ್ಯತ್ಯಾಸಗಳನ್ನು, ಸೇರ್ಪಡೆಯನ್ನು, ಸ್ವಂತಿಕೆಯನ್ನು, ಜಾಣ್ಮೆಯನ್ನು

ಸಂದರ್ಭೋಚಿತವಾಗಿ ಒಳಗೂಡಿಸಿ, ಅಳವಡಿಸಿ, ಹೊಸ ತಿರುವು ನೀಡಿ, ಕಾವ್ಯವು ನವ್ಯವಾಗಿ ಪರಿಣಮಿಸುವಂತೆ ನಿರೂಪಿಸಿದ್ದಾನೆ.

## ಆ) ಚಾಮರಸನ ಇತಿವೃತ್ತ

ಚಾಮರಸ ಕನ್ನಡದ ಮಹಾಕವಿಗಳಲ್ಲೊಬ್ಬ. ಈತನು ಕುಮಾರವ್ಯಾಸನ ಕಾಲದಲ್ಲಿ ಜೀವಿಸಿದ್ದವನು. ಬೇರೆ ಬೇರೆ ಧರ್ಮಕ್ಕೆ ಸೇರಿದ್ದ ಇಬ್ಬರು ಶ್ರೇಷ್ಠ ಕವಿಗಳು ಒಂದೇ ಕಾಲದಲ್ಲಿ ಬದುಕಿದ್ದರೆ ಅವರವರ ಅಭಿಮಾನಿಗಳು ಕಟ್ಟುವ ದಂತ್ಕತೆಗಳಿಗೆ ಲೆಕ್ಕವಿರುವುದಿಲ್ಲ. ಒಂದು ದಂತ ಕಥೆಯ ಪ್ರಕಾರ ಕುಮಾರವ್ಯಾಸನು ಚಾಮರಸನ ತಂಗಿಯ ಗಂಡ; ಭಾವ ಮೈದುನ. ಗದುಗಿನ ದೊರೆಯಾದ ದೇವರಾಮನ ಅಪ್ಪಣೆಯಂತೆ ಇಬ್ಬರೂ ಮಹಾಭಾರತದ ಮೊದಲ ಹತ್ತು ಪರ್ವಗಳನ್ನು ತಲಾ ಐದ್ಯೆದು ಪರ್ವಗಳಂತೆ ಹಂಚಿಕೊಂಡು ಬರೆದರಂತೆ. ಪಂಡಿತರೆಲ್ಲ ಒಮ್ಮತದಿಂದ ಚಾಮರಸನ ಕೃತಿ ಶ್ರೇಷ್ಠವೆಂದರು. ಕುಮಾರವ್ಯಾಸ ಅಪಮಾನವನ್ನು ತಾಳಲಾರದೆ ಹೆಂಡತಿಯ ಮೊರೆ ಹೊಕ್ಕನು. ಆಕೆ ಅಣ್ಣನ ಕೃತಿಯನ್ನು ಸುಟ್ಟು ಭಸ್ಮ ಮಾಡಿ ಗಂಡನಿಗೆ ರಕ್ಷಣೆ ಒದಗಿಸಿದಳು. ಇದರಿಂದಾಗಿ ವೈರಾಗ್ಯ ತಾಳಿದ ಚಾಮರಸನು ವೀರಶೈವ ದೀಕ್ಷೆ ಹೊಂದಿದನು. ನಂತರ ಪ್ರಭುಲಿಂಗಲೀಲೆ ಬರೆದು ರಾಜ ಮನ್ನಣೆ ಪಡೆದನು. ಆತನ ಕೃತಿಯನ್ನು ಆನೆಯ ಮೇಲಿಟ್ಟು ಮೆರೆಸುತ್ತಾರೆ. ಹೀಗೆ ಚಾಮರಸನನ್ನು ಗೌರವಿಸಿದ ರಾಜನು ವಿಜಯನಗರದ ಅರಸು ಪ್ರೌಢ ದೇವರಾಯನೆಂದು ತಿಳಿಯುತ್ತದೆ.

ಯಾವುದೇ ವಿವಾದಗಳು ಏನೇ ಹೇಳಿದರೂ ಚಾಮರಸ ಕುಮಾರವ್ಯಾಸನಿಗೆ ಸಮಾನವಾದ ಒಂದು ಅಂಶವಿದೆ. ಇಬ್ಬರೂ ತಮ್ಮ ಕಾವ್ಯಗಳಲ್ಲಿ ತಮ್ಮ ಸ್ವಂತ ವಿಷಯವನ್ನೂ ಹೇಳಿಕೊಂಡಿಲ್ಲ. ಬೇರೆ ಬೇರೆ ಮೂಲಗಳಿಂದ ದೊರೆಯುವ ಸಂಗತಿಗಳನ್ನೆಲ್ಲಾ ಕ್ರೋಢಿಕರಿಸಿ ಚಾಮರಸನ ಜೀವನ, ಕಾಲ ಮತ್ತು ದೇಶಗಳನ್ನು ಗುರುತಿಸಬೇಕಾಗಿದೆ. ಈತನ ಹೆಸರು ಚಾಮ, ಚಾಮರಸ, ಚಾಮಯ್ಯ ಎಂದು ಸಿಗುತ್ತದೆ. ಚಾಮರಸನ ತಂದೆ-ತಾಯಿಯ ಹೆಸರು ತಿಳಿದು ಬಂದಿರುವುದಿಲ್ಲ. ನಾಗಣಾಪುರ ಅಥವಾ ಗದಗ ಈತನ ಊರು. ಗದುಗಿನಲ್ಲಿ ಬಹುಕಾಲ ಆತ ವಾಸಿಸಿದ್ದು ನಂತರ ವಿಜಯನಗರ ಅರಸು ಪ್ರೌಢದೇವರಾಯನ ಕಾಲದ ನೂರೊಂದು ವಿರಕ್ತರೊಡನೆ ಈತನ ಹೆಸರು ಬರುವುದರಿಂದ ಆ ಕಾಲದಲ್ಲಿ ಜೀವಿಸಿದ್ದನೆಂದು ಸ್ಪಷ್ಟವಾಗಿ ಹೇಳಬಹುದು. ಆದುದರಿಂದ ಈತನ ಕಾಲವನ್ನು ಕ್ರಿ.ಶ.1430 ಎಂದು ವಿದ್ವಾಂಸರು ಒಪ್ಪಿರುತ್ತಾರೆ.

ಚಾಮರಸ ಲೌಕಿಕವಾಗಿ ಉನ್ನತ ಸ್ಥಾನಮಾನಗಳನ್ನು ಹೊಂದಿದ್ದನೆಂದು ಕೆಲವು ಪುರಾಣಗಳ ಹೇಳಿಕೆ. ಆದರೂ ವಿವಿಧ ವಿದ್ವಾಂಸರು ಹಲವು ರೀತಿಯಲ್ಲಿ ಹೇಳಿರುತ್ತಾರೆ. ಚಾಮರಸನ ಕಾಲವನ್ನು ಡಾ.ಕಿಟ್ಟಲ್ ಅವರು ಸುಮಾರು ಕ್ರಿ.ಶ.1460 ಎಂದು, ರಾ.ನರಸಿಂಹಚಾರ್ಯರು ಮತ್ತು ಇ.ಪಿ.ರೈಸ್‌ಅವರು ಕ್ರಿ.ಶ. ಸುಮಾರು 1430 ಎಂದು ಹೇಳಿದ್ದಾರೆ. ಡಾ.ವೆಂಕಟಸುಬ್ಬಯ್ಯನವರು ಕ್ರಿ.ಶ. ಹದಿಮೂರನೆಯ ಶತಮಾನದ ಉತ್ತರಾರ್ಧವೆಂಬುದಾಗಿಯೂ ಹೇಳಿದ್ದಾರೆ.[2] ಪ್ರೌಢದೇವರಾಯನಲ್ಲಿ ಅವನು ಮಂತ್ರಿಯಾಗಿದ್ದನೆಂದು ಅವುಗಳಿಂದ ಸಿದ್ಧಿಸುವುದರಿಂದಲೂ ಸಮಕಾಲೀನನಾದ ಚಾಮರಸನು ಕ್ರಿ.ಶ.1430 ರ ಸುಮಾರಿನಲ್ಲಿ

ಇದ್ದಿರಬೇಕೆಂದು ಹೇಳಬೇಕಾಗುತ್ತದೆ.[೮]

ಚಾಮರಸನ ವಿಚಾರವಾಗಿ ನಮಗೆ ಹೆಚ್ಚು ಸಂಗತಿಗಳು ದೊರೆಯುವುದಿಲ್ಲ. ಆತನ ತಂದೆ ತಾಯಿಗಳು, ಗುರು, ಹುಟ್ಟಿದ ಸ್ಥಳ ಮುಂತಾದವುಗಳನ್ನು ಕವಿ ಹೇಳಿಕೊಂಡಿಲ್ಲ. ಕರಸ್ಥಲದ ವೀರಣ್ಣೊಡೆಯ, ನಾಗಿದೇವ ಮುಂತಾದ ವಿರಕ್ತರ ಚರಿತ್ರೆಗಳು, ನಾಗಲಿಂಗನ ಕಥೆ, ವಿರಕ್ತರ ಕಾವ್ಯ ಮುಂತಾದ ಗ್ರಂಥಗಳಲ್ಲಿ ದೊರೆಯುತ್ತದೆ. ಆದರೆ ಚಾಮರಸನ ವೃತ್ತಾಂತ ಮಾತ್ರ ಆ ಗ್ರಂಥಗಳಲ್ಲಿ ದೊರೆಯುವುದಿಲ್ಲ.

ಚಾಮರಸನು ಹಿಂದಿನ ಜನ್ಮದಲ್ಲಿ ಒಂದು ಇರುವೆಯಾಗಿದ್ದನೆಂದೂ, ಕಕ್ಕಯ್ಯನ ಪ್ರಸಾದವನ್ನು ಬಸವಣ್ಣನವರಿಗೆ ತಂದು ಕೊಟ್ಟನೆಂದು ಗುರುರಾಜ ಚರಿತ್ರೆಯಲ್ಲಿ ಹೇಳಿದೆ. ಆತನ ಮನುಷ್ಯ ಜನ್ಮದ ವೃತ್ತಾಂತವನ್ನು ನೋಡಿದರೆ ಹುಟ್ಟಿದ ಸ್ಥಳದ ವಿಚಾರದಲ್ಲಿ ಭಿನ್ನಾಭಿಪ್ರಾಯಗಳಿವೆ. ಚಾಮರಸನು ನಾಗಣಪುರದವನೆಂದು ಪ್ರಭುದೇವರ ಸಾಂಗತ್ಯದಲ್ಲಿ ಹೇಳದೆ ಆತನು ಗದುಗಿನವನೆಂದು ಗುರುವಾರ ಚಾರಿತ್ರ, ಚೋರಬಸವ ಚರಿತ್ರೆಗಳಲ್ಲಿ ಹೇಳಿದೆ. ಪ್ರೌಢರಾಯನ ಕಾವ್ಯ, ಭೈರವೇಶ್ವರ ಕಾವ್ಯ, ಕಥಾ ಸೂತ್ರ ರತ್ನಾಕರಗಳಿಂದ ಆತನು ವಿಜಯನಗರದ ಪ್ರೌಢದೇವರಾಯನ ಅಸ್ಥಾನದಲ್ಲಿದ್ದನೆಂದು ತಿಳಿದು ಬರುತ್ತದೆ. ನೂರೊಂದು ವಿರಕ್ತರಿಗೆ ಶಂಕರಾಚಾರ್ಯ ಸ್ವಾಮಿಗಳೆಂಬುವರು ಷಟ್ಸ್ಥಲ ಜ್ಞಾನೋಪದೇಶ ಮಾಡಿದಂತೆ ತಿಳಿಯುವುದರಿಂದ ಈ ಶಂಕರಾಚಾರ್ಯ ಸ್ವಾಮಿಗಳು ಚಾಮರಸನಿಗೆ ಗುರುವಾಗಿದ್ದಿರಬಹುದು.

ಪ್ರೌಢದೇವರಾಯನು ಚಾಮರಸನ ಅಭಿಮಾನಿಯಾಗಿದ್ದಂತೆ ತಿಳಿದು ಬರುತ್ತದೆ. ಚಾಮರಸನು ಜನ್ಮತ: ವೀರಶೈವನಾಗಿರದೆ, ದೊಡ್ಡವನಾದ ಮೇಲೆ ವೀರಶೈವ ದೀಕ್ಷೆ ಪಡೆದಿರಬೇಕೆಂದು ಕೆಲವು ವಿದ್ವಾಂಸರು ಹೇಳುತ್ತಾರೆ. ಅನ್ಯಮತ ಕೋಲಾಹಲ, ವೀರಶೈವಾಚಾರ ಮಾರ್ಗ ಸಾರೋದ್ಧಾರ ಮುಂತಾಗಿ ಮುಂದಿನ ವೀರಶೈವ ಕವಿಗಳೇನೋ ಹೊಗಳಿದ್ದಾರೆ. ಚಾಮರಸನು ಲೌಕಿಕವಾಗಿ ಉನ್ನತ ಸ್ಥಾನಮಾನಗಳನ್ನು ಹೊಂದಿದ್ದನೆಂದು ಕೆಲವು ಪುರಾಣಗಳ ಅಭಿಮತ. ಆದರೆ ಅವನ ಕಾವ್ಯವನ್ನೇ ಮೌಲ್ಯಮಾಪನವಾಗಿಟ್ಟುಕೊಂಡು ಪರೀಕ್ಷಿಸಿದರೆ ಆತನ ಪ್ರವೃತ್ತಿ ವೈರಾಗ್ಯಶೀಲವಾದುದೆಂಬುದು ಸ್ಪಷ್ಟವಾಗುತ್ತದೆ. ಯಾವ ರಾಜಾಶ್ರಯಕ್ಕೂ ಹೊಂದಿಕೊಳ್ಳುವ ವ್ಯಕ್ತಿತ್ವ ಅವನದಲ್ಲ.

ಚಾಮರಸನು ಭಾಮಿನೀ ಷಟ್ಪದಿಯಲ್ಲಿ ಬರೆದಿರುವ ಪ್ರಭುಲಿಂಗಲೀಲೆಯು ಕನ್ನಡದ ಮಹಾಕಾವ್ಯಗಳಲ್ಲೊಂದು. ವೀರಶೈವರಿಗಂತೂ ಪೂಜನೀಯ ಗ್ರಂಥ. ಬೇರೆಯವರಿಗೂ ಪ್ರಿಯವಾದ ಕೃತಿ. ತೆಲುಗು, ತಮಿಳು, ಮರಾಠಿ ಮತ್ತು ಸಂಸ್ಕೃತ ಭಾಷೆಗಳಿಗೆ ಈ ಕಾವ್ಯವು ಬಹು ಹಿಂದೆಯೇ ಭಾಷಾಂತರವಾಗಿದೆ. ಇಷ್ಟೊಂದು ಭಾಷೆಗಳಿಗೆ ಶತಮಾನಗಳ ಹಿಂದೆಯೇ ಭಾಷಾಂತರಗೊಂಡ ಕೃತಿ ಕನ್ನಡದಲ್ಲಿ ಇದೊಂದೆ ಎನ್ನುವುದು ಇದರ ಮೌಲ್ಯವನ್ನು ಹೆಚ್ಚಿಸಿದೆ. ಅಲ್ಲಮನ ವಿಷಯವಾಗಿ ಪ್ರಭುನಟನ ತಾರಾವಳಿ, ಪ್ರಭು ಚರಿತ್ರೆ, ಪ್ರಭುಗೀತೆ ಮೊದಲಾದ ಕೃತಿಗಳು ಹುಟ್ಟಿವೆಯೆಂಬುದಾಗಿ ಕವಿಚರಿತೆಕಾರರು ಅಭಿಪ್ರಾಯ ಪಡುತ್ತಾರೆ.

---

ಆ ಕಾಲದ ಕವಿಯ ಮನೋಧರ್ಮವೇನು ಎನ್ನುವುದು ಪ್ರಭುಲಿಂಗಲೀಲೆಯ ಕವಿಯೇ ತನ್ನ ಕೃತಿಯ ಆರಂಭದಲ್ಲಿಯೇ ಸ್ಪಷ್ಟವಾಗಿ ಈ ರೀತಿ ಹೇಳಿದ್ದಾನೆ.

ಸತ್ತವರ ಕಥೆಯಲ್ಲ ಜನನದ
ಕುತ್ತದಲಿ ಕುದಿಕುದಿದು ಕರ್ಮದ
ಕತ್ತಲೆಗೆ ಸಿಲುಕುವರ ಸೀಮೆಯು ಹೊಲಬು ತಾನಲ್ಲ
ಹೊತ್ತು ಹೋಗದೆ ಪುಂಡರಾಲಿಪ
ಮತ್ತಮತಿಗಳ ಗೋಷ್ಠಿಯಲ್ಲಿದು
ಸತ್ಯಶರಣರು ತಿಳಿವುದೀ ಪ್ರಭುಲಿಂಗಲೀಲೆಯನು

ಕುರಿಗಳೋಪಾದಿಯಲಿ ಕಬ್ಬಿನ
ಹೊಱಗಣೆಲೆಯನೆ ಮೇದಕಟ ಮೆಲು
ಕಿಱುವುತಲ್ಪಸುಖಕ್ಕೆ ಸೋಲದೆ ಕಬ್ಬಿನೊಳು ರಸವ
ನೆಱೆ ಸವಿವ ಸವಿವ ಗಜದಂತೆ ಭಕ್ತಿಯ
ತೆಱನ ತಿಳಿದಾಚರಿಸಬೇಕೆಂ
ದಱಿದವರು ಲಾಲಿಸುವುದೀ ಪ್ರಭುಲಿಂಗಲೀಲೆಯನು [೯]

ಈ ಪದ್ಯಗಳಲ್ಲಿ ಚಾಮರಸನು ತನ್ನ ಕಾಲದ ಮನೋಭಾವನೆಗಳೇನೆಂಬುದನ್ನು ಕಾಳಗದ ಕಥೆ ಸತ್ತವರ ಕಥೆ ಎಂಬ ಮಾತುಗಳಲ್ಲಿ ಸೂಚಿಸಿರುವಂತೆ ತೋರುತ್ತದೆ. ಅಷ್ಟೇ ಅಲ್ಲ ತನ್ನ ಕಾಲದ ಶರಣರ ಬದುಕನ್ನು ಕುರಿತ ಭಾವನೆಗಳಿಗೆ ಹೊಂದಿಕೆಯಾಗದ ಕೃತಿಗಳನ್ನು ಪೂರ್ತಿಯಾಗಿ ಅಲಕ್ಷಿಸಿದಂತೆ ತೋರುತ್ತದೆ. 'ವಿವರಿಸುವೊಡೀ ಲೀಲೆಯನು ಹೇಳುವನು ದಿಟ ನಾನಲ್ಲ ಗುರು ಗುಹೇಶ್ವರನಾಗಳೆನ್ನನು ನುಡಿಸಿದಡೆ ನುಡಿದಾಗು ಮಾಡಿಯೆ ಪೇಳ್ವೆನು?' ಎಂದು ಚಾಮರಸನು ಹೇಳುತ್ತಾನೆ. ಮಹಾಭಾರತದಂತಹ ಲೌಕಿಕ ಕಾವ್ಯಗಳನ್ನು ಬರೆದ ಕವಿಗಳನ್ನು, ಅದರಲ್ಲಿಯೂ ಕುಮಾರವ್ಯಾಸನನ್ನು ಆತ ಹಂಗಿಸಿರುವ ಧ್ವನಿಯನ್ನು ಮೇಲಿನ ಪದ್ಯದಲ್ಲಿ ಕಾಣಬಹುದು. ಪ್ರಭುಲಿಂಗಲೀಲೆ ಕನ್ನಡ ಸಾಹಿತ್ಯದಲ್ಲಿ ಒಂದು ಉತ್ತಮ ಕಾವ್ಯವಾಗಿದೆ. ಅದಕ್ಕಿಂತ ಪ್ರೌಢವಾದ ಗ್ರಂಥಗಳನ್ನು ವೀರಶೈವ ಕವಿಗಳಲ್ಲಿಯೇ ಇತರರು ರಚಿಸಿರಬಹುದು. ಆದರೆ ಯೋಗಿ ಶ್ರೇಷ್ಠನಾದ ಒಬ್ಬ ಅವತಾರ ಪುರುಷನ ಜೀವನ ಚರಿತ್ರೆಯನ್ನು ಆತನ ಬೋಧೆಗಳನ್ನು ಸರಳವಾಗಿ ಕಾವ್ಯ ರೂಪದಲ್ಲಿಡುವುದು ಹೇಗೆಂಬುದನ್ನು ಚಾಮರಸನು ತೋರಿಸಿರುವಂತೆ ಇತರ ವೀರಶೈವ ಪುರಾಣ ಕವಿಗಳು ತೋರಿಸಿಲ್ಲ.[೧೦] ಎನ್ನುವ ಅಭಿಪ್ರಾಯವು ವೀರಶೈವ ಕವಿಗಳಲ್ಲಿ ಚಾಮರಸನ ಸ್ಥಾನವೇನೆಂಬುದನ್ನು ನಿರ್ಧರಿಸುತ್ತವೆ.

ಒಬ್ಬ ವ್ಯಕ್ತಿಯ ಚರಿತ್ರೆ ಬರೆಯುವಲ್ಲಿ ಇತಿಹಾಸ ಸಾಮಾಗ್ರಿಗಳು ಸಾಲದೇ ಹೋದಾಗ ಆತನ ಧೋರಣೆಗಳನ್ನೇ ಚರಿತ್ರೆಗೆ ಬಳಸಿಕೊಳ್ಳಬೇಕಾಗುತ್ತದೆ. ಈ ದೃಷ್ಟಿಯಿಂದ ನೋಡಿದರೆ ವ್ಯಕ್ತಿ ಚರಿತ್ರೆಯ ಬಗೆಗೆ ಮಹಾಮೌನಿಯಾಗಿರುವ ಚಾಮರಸ, ವ್ಯಕ್ತಿತ್ವ ಚಾರಿತ್ರ್ಯದ ವಿಷಯವಾಗಿ ಬೆಲೆಯುಳ್ಳ ಅಂಶವನ್ನು ಕೊಡುತ್ತಾನೆ. ಅದು ಅಕಾಯಚರಿತ್ರೆ ಧೋರಣೆ. ಆದುದರಿಂದಲೇ "ವಿವರಿಸುವೊಡೀ ಲೀಲೆಯನು ಹೇಳುವನು ದಿಟನಾನಲ್ಲ" ಎಂದು ಕವಿ ಹೇಳಿಕೊಂಡಿದ್ದಾನೆ.

---

ಪ್ರಭುಲಿಂಗಲೀಲೆಯ ನಾಯಕ ಅಲ್ಲಮ ಕನ್ನಡನಾಡಿನ ಮಹಾಸಂತರಲ್ಲೊಬ್ಬ. ವೀರಶೈವ ಧರ್ಮಪ್ರತಿಪಾದಕರಲ್ಲಿ ಅಗ್ರಗಣ್ಯ. ಹನ್ನೆರಡನೆಯ ಶತಮಾನದ ವೀರಶೈವ ಕ್ರಾಂತಿಯ ಮುಂಚೂಣಿಯಲ್ಲಿದ್ದವನು. ಶೂನ್ಯ ಸಿಂಹಾಸನದ ಅಧಿಪತಿ. ಬಸವಣ್ಣನಿಂದ ಮೊದಲುಗೊಂಡು ಮುಕ್ತಾಯಕ್ಕನವರೆಗೆ ತಾನು ಸಂಧಿಸಿದವರನ್ನೂ ಅಣ್ಣನೆಂದು ಅಕ್ಕನೆಂದು, ತಾಯಿಯೆಂದು ಅಕ್ಕರೆಯಿಂದ ಮಾತನಾಡಿಸಿ, ದಾರಿ ತಿಳಿಯದವರಿಗೆ ನಡೆಗಲಿಸುವ ನಂಟನಾಗಿ, ಪಥಭ್ರಷ್ಟರಿಗೆ ಅನುಕಂಪದ ರಸಾರ್ದ್ರತೆಯಿಂದ ಸರಿದಾರಿಯತ್ತ ಕರೆದೊಯ್ದು ಬೆನ್ನು ತಟ್ಟುವ ನೇಹಿಗನಾಗಿ ತಲೆಯಲ್ಲಿ ಹೆಪ್ಪಿಟ್ಟ ಅಂಧ ಶ್ರದ್ಧೆಯನ್ನು ಕಡುಮಾತಿನ ಬಿಸಿಯಿಂದ ಕರಗಿಸುವ ಭಂತನಾಗಿ, ಆ ಕಾಲದ ಎಲ್ಲ ಶರಣ ಶರಣೆಯರಿಗೆ ಮಾರ್ಗದರ್ಶಕ ಗುರು ಮತ್ತು ತಂದೆ ಸ್ಥಾನದಲ್ಲಿದ್ದ ಹಿರಿಯ ವ್ಯಕ್ತಿ. ವೀರಶೈವ ಧರ್ಮ ಮತ್ತು ವಚನ ಸಾಹಿತ್ಯಕ್ಕೆ ರಾಜಕೀಯ, ಸಾಮಾಜಿಕ ಹಿನ್ನಲೆಯನ್ನು ಕಲ್ಪಿಸಿಕೊಟ್ಟವರು ಬಸವಣ್ಣನಾದರೆ ಅನುಭಾವ ಮತ್ತು ತಾತ್ವಿಕ ಬೆನ್ನಲುಬಾದವನು ಪ್ರಭುದೇವ. ಆತನ ಬದುಕು ಒಬ್ಬೊಬ್ಬ ಕವಿಗೆ ಒಂದೊಂದು ರೀತಿಯಲ್ಲಿ ಗೋಚರಿಸಿದೆ ಎಂದರೆ ತಪ್ಪಾಗಲಾರದು. ಆತನ ವಚನಗಳು ರಹಸ್ಯ ರಮ್ಯವಾಗಿದೆ.

---

## ಅಡಿಟಿಪ್ಪಣಿಗಳು :

೦೧. ಎಂ.ಎಂ. ಕಲ್ಬುರ್ಗಿ : ಮಾರ್ಗ : ಪು.ಸಂ. ೨೦೦
೦೨. ಹರಿಹರನ ರಗಳೆಗಳಲ್ಲಿ ಜೀವನದರ್ಶನ : ಸ.ಸ. ಮಾಳವಾಡ : ಪು.ಸಂ. ೧೬
೦೩. ನೂತನ ಪುರಾತನರ ರಗಳೆ : ಎಂ.ಎಸ್. ಸುಂಕಾಪುರ : ಪು.ಸಂ. ೧೫
೦೪. ಉದ್ಧೃತ : ಚಾಮರಸ : (ಸಂ) ವಿ. ಸೀತಾರಾಮಯ್ಯ : ಪು.ಸಂ. ೨೭
೦೫. ಹರಿಹರನ ರಗಳೆಗಳಲ್ಲಿ ಜೀವನ ದರ್ಶನ : ಸ.ಸ. ಮಾಳವಾಡ. : ಪು.ಸಂ. ೧೦
೦೬. ಹರಿಹರನ ರಗಳೆಗಳಲ್ಲಿ ಜೀವನ ದರ್ಶನ : ಸ.ಸ. ಮಾಳವಾಡ : ಪು.ಸಂ. ೧೬
೦೭. ಚಾಮರಸ : ವಿ. ಸೀತಾರಾಮಯ್ಯ, ಟಿ.ವಿ. ವೆಂಕಟಾಚಲಶಾಸ್ತ್ರಿ : ಪು.ಸಂ. ೧೪
೦೮. ಅದೇ : ಪು.ಸಂ. ೮
೦೯. ಚಾಮರಸನ ಪ್ರಭುಲಿಂಗಲೀಲೆ : ಎಸ್. ವಿದ್ಯಾಶಂಕರ : ಪು.ಸಂ. ೨೧
೧೦. ಷಟ್ಪದಿ ಸಾಹಿತ್ಯ : ಕೆ.ಆರ್. ಮರುಳಸಿದ್ದಪ್ಪ : ಪು.ಸಂ. ೧೧೯

## ಅಧ್ಯಾಯ - ೨

## ಅ) ಪ್ರಭುದೇವರ ರಗಳೆ : ರಚನೆಯ ಹಿನ್ನಲೆ, ಕಥಾವಸ್ತು

ಅಲ್ಲಮಪ್ರಭು ಹನ್ನೆರಡನೇ ಶತಮಾನದ ಶರಣರ ಸಾಧನೆಯ ಮಾರ್ಗಕ್ಕೆ ಪರಿಪೂರ್ಣತೆಯ ಸ್ವರೂಪವನ್ನು ನೀಡಿದವನೂ, ಶರಣ ಸಂದೋಹಕ್ಕೆ ಗುರು ಸಮಾನನಾಗಿ ಪೂಜ್ಯನಾಗಿದ್ದವನೂ, ಅನುಭವ ಮಂಟಪದ ಅಗ್ರಗಣ್ಯನೂ ಆಗಿದ್ದವನು. ಇವನನ್ನು ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಅಲ್ಲಮ, ಅಲ್ಲಮಪ್ರಭು, ಪ್ರಭುದೇವ ಎಂಬ ಹೆಸರುಗಳಿಂದ ಕರೆಯಲಾಗಿದೆ. ಇವನನ್ನು ಕುರಿತಂತೆ ಕನ್ನಡದಲ್ಲಿ 'ಶೂನ್ಯಸಂಪಾದನೆ', 'ಪ್ರಭುಲಿಂಗ ಲೀಲೆ' ಮುಂತಾದ ಕೃತಿಗಳು ರಚನೆಯಾಗಿವೆ. ಇವುಗಳ ಸಾಲಿನಲ್ಲಿ ಹರಿಹರ ಕವಿಯ 'ಪ್ರಭುದೇವರ ರಗಳೆ'ಯೂ ಒಂದು. ಇದು ಪ್ರಭುದೇವರನ್ನು ಕುರಿತಂತೆ ಕನ್ನಡದಲ್ಲಿ ರಚನೆಯಾದ ಮೊದಲ ಕೃತಿ. ಇತರ ಕೃತಿಗಳಿಗೆ ಹೋಲಿಸಿದರೆ ಹರಿಹರನ ಈ ಕೃತಿ ಬಹಳ ಚಿಕ್ಕದಾಗಿದೆ. ಕೇವಲ ಹದಿನೆಂಟು ಪುಟಗಳ ಒಂದೇ ಒಂದು ಸ್ಥಲದಲ್ಲಿ ಕವಿ ಪ್ರಭುದೇವರ ಕಥೆಯನ್ನು ನಿರೂಪಿಸಿದ್ದಾನೆ. ಆದರೂ ಅಲ್ಲಮನ ಜೀವನ ಚಿತ್ರದ ಸಂದರ್ಭದಲ್ಲಿ ಈ ಕೃತಿಗೆ ಮಹತ್ವದ ಸ್ಥಾನ ಇದೆ. ಕವಿ ಒಂದು ಸ್ಥಲದಲ್ಲಿಯೇ ಅಲ್ಲಮನ ಅಸಾಧಾರಣ ಬದುಕನ್ನು ಚಿತ್ರಿಸಿದ್ದಾನೆ. "ಹರಿಹರನ ಭಕ್ತಿಭಾವ ತುಂಬಿ ಹರಿದುದು ರಗಳೆಗಳಲ್ಲಿ. ಭಕ್ತಕವಿಯಾದ ಈತನು ಶಿವಶರಣರ ಚರಿತ್ರೆಗಳನ್ನು ಬರೆಯುವ ನೆವದಲ್ಲಿ ತನ್ನ ಭಕ್ತಿಯ ಪರಾಕಾಷ್ಠೆಯನ್ನು ಮೆರೆದಿದ್ದಾನೆ. ಅಲ್ಲಿ ಭಿನ್ನ ಮನೋಧರ್ಮದ ಶಿವಶರಣರು ತಮ್ಮ ವೃತ್ತಿಯನ್ನು ಭಕ್ತಿಯ ಸಾಧನ ಮಾಡಿಕೊಂಡಿದ್ದಾರೆ; ಕಾಯಕದ ರೂಪದಲ್ಲಿ ಪರ್ಯವಸಾನಗೊಳಿಸಿಕೊಂಡಿದ್ದಾರೆ.[1] ಎನ್ನುವ ಮಾತುಗಳು ಹರಿಹರನ ಉಳಿದ ರಗಳೆಗಳಿಗೂ ಅಲ್ಲಿ ಬರುವ ಭಕ್ತರಿಗೂ ಅನ್ವಯವಾಗುತ್ತದೆ ಎನ್ನುವುದನ್ನು ಗಮನಿಸಬಹುದು. ಚಾಮರಸನು ತನ್ನ ಕೃತಿಯಲ್ಲಿ ಇದೇ ಮನೋಭಾವವನ್ನು ಅಂದರೆ ಅಲ್ಲಮನು ಎಲ್ಲಾ ಸ್ತರದ ಭಕ್ತರನ್ನು ಉದ್ಧರಿಸುವುದು ಈ ನೆಲೆಯಲ್ಲಿಯೆ ಎನ್ನುವುದನ್ನು ಗಮನಿಸಬಹುದು. ಈ ಅಂಶವು ಎರಡೂ ಕೃತಿಗಳಲ್ಲೂ ಸಾಮ್ಯವಾಗಿ ಗೋಚರಿಸುತ್ತದೆ.

ಹರಿಹರನು ತನ್ನ ಕಾವ್ಯಕ್ಕೆ ಕಥಾವಸ್ತುವನ್ನು ಆರಿಸಿಕೊಂಡಿದ್ದರಲ್ಲಿ ವಿಶಿಷ್ಟತೆಯನ್ನು ತೋರಿಸಿದ್ದಾನೆ. ಪುರಾಣೇತಿಹಾಸಗಳಿಂದ ಗಿರಿಜಾ ಕಲ್ಯಾಣದ ಹೊರತು ಬೇರೆ ಯಾವ ವಸ್ತುವನ್ನು ಆರಿಸಿಕೊಳ್ಳಲಿಲ್ಲ. ದೇವ ದೇವತೆಗಳಲ್ಲದೆ ಜನಸಾಮಾನ್ಯರೇ ಆಗಿದ್ದರೂ ತಮ್ಮ ಶೀಲ ಸದ್ಗುಣಗಳಿಂದ ದೇವಮಟ್ಟಕ್ಕೆ ಏರಿದ ಭಕ್ತಶ್ರೇಷ್ಠರ ಜೀವನಗಳನ್ನು ರಗಳೆಗಳ ವಸ್ತುವಾಗಿ ಆರಿಸಿಕೊಂಡನು. "ಶರಣರ ನಿರ್ಮಲ ಜೀವನ, ನಿಷ್ಕಪಟ ಪ್ರೇಮ, ಶ್ರದ್ಧಾನ್ವಿತವಾದ ಬಾಳು, ಸಾಕಾರನಿಷ್ಠೆ, ಸರ್ವಭೂತಂಗಳೊಳು ಅನುಕಂಪ-ಆತನ ಮನಸ್ಸನ್ನು ಸೂರೆಗೊಂಡಿದ್ದುವು. ಸಾಮಾನ್ಯ ಮನುಷ್ಯರಂತೆ ಹುಟ್ಟಿದ ಶಿವಶರಣರು ದೇವರ ಹಾಗೆ ಲೋಕದಲ್ಲಿ ನಡೆದುಕೊಂಡರು. ಎಲ್ಲರ ಜೀವನದಲ್ಲಿಯೂ ಸಾಮಾನ್ಯವಾಗಿ ಕಂಡುಬರುವ ಕಷ್ಟಕಾರ್ಪಣ್ಯಗಳು, ಸುಖದು:ಖಗಳು ಅವರ ಜೀವನದಲ್ಲಿಯೂ ಕಂಡುಬಂದರೂ ಅವನ್ನೆಲ್ಲ ಮೀರಿ ನಿಂತರು. ಬಾಳಿನ ಆಕ್ರೋಶವನ್ನು ಅದುಮಿ ಇಹಪರದ ಹಂಗನ್ನು ಹರಿದೊಗೆದು ನಿಂತ ಅವರ ಜೀವನ ದೃಷ್ಟಿ ಹರಿಹರನಿಗೆ ತುಂಬ ಹಿಡಿಸಿದಂತೆ ತೋರುತ್ತದೆ.[2] ಎಂಬುದಾಗಿ ಹಾ.ಮಾ. ನಾಯಕರು ಅಭಿಪ್ರಾಯ ಪಟ್ಟಿದ್ದಾರೆ. ಈ ರೀತಿ ಸಾಮಾನ್ಯರಲ್ಲಿ ಅಸಾಮಾನ್ಯ ನಾಯಕರನ್ನು ಶೋಧಿಸುವ ಹೊಸಹಾದಿಯನ್ನು ಹರಿಹರ

ಹಾಕಿಕೊಟ್ಟನು.

ಅಲ್ಲಮನ ಹುಟ್ಟಿಗೆ ಹರಿಹರ ಶಾಪದ ರೂಪ ಕೊಟ್ಟಿದ್ದಾನೆ. ಕವಿ ತಿಳಿಸುವಂತೆ ಅಲ್ಲಮ ಮೊದಲು ಕೈಲಾಸದಲ್ಲಿ ನಿರ್ಮಾಯನೆಂಬ ಗಣನಾಗಿದ್ದವನು. ಒಮ್ಮೆ ಕೈಲಾಸದಲ್ಲಿ ಸುರಸತಿಯೊಬ್ಬಳನ್ನು ಆಸೆಯಿಂದ ನೋಡುತ್ತಾನೆ. ಇದನ್ನು ಕಂಡ ಶಿವನು ನಿರ್ಮಾಯ ಮತ್ತು ಸುರಸತಿಯರನ್ನು

ದಯಾಪರದಿಂದೆ
ನೀವಿರ್ವರುಂ ಪೋಗಿ ವಸುಮತಿಯೊಳಗೆ ಪುಟ್ಟಿ
ಕಾವಂಗೆ ವಶವಾದ ಸಕಲಸುಖಮಂ ಮುಟ್ಟಿ
ಹರುಷದಿಂದಿರ್ದಿರದೆ ಬರ್ಪುದೆಂದೊಸೆದಿತ್ತ [೩]

ಎಂದು ಶಪಿಸುತ್ತಾನೆ. ಆ ಶಾಪದಿಂದ ನಿರ್ಮಾಯ ಮತ್ತು ಸುರಸತಿಯರಿಬ್ಬರೂ ಭೂಮಿಯಲ್ಲಿ ಜನಿಸುತ್ತಾರೆ. ಭೂಲೋಕದಲ್ಲಿ ಇರುವ 'ಬಳ್ಳಿಗಾವೆ'ಯೆಂಬ ಪುರದಲ್ಲಿ, ಮಲ್ಲಿಕಾಪುರದ ನಾಗವಾಸಾಧಿಪತಿಯ ಮಗನಾಗಿ, ಅಲ್ಲಯ್ಯನೆಂಬ ಅಭಿದಾನವನ್ನು ಹೊತ್ತು ನಿರ್ಮಾಯ ಜನಿಸುತ್ತಾನೆ. ಸುರಸತಿ ಅದೇ ಪುರದ ಧನದತ್ತನ ಸತಿಯ ಬಸುರಲ್ಲಿ ಕಾಮಲತೆ ಎಂಬ ಅಭಿದಾನವನ್ನು ಹೊತ್ತು ಜನಿಸುತ್ತಾಳೆ.

ಹರನ ಪ್ರಸಾದಪಾದೋದದಕದೊಳೇ ಬಾಳ್ವ
ಪುರಹರನ ಶರಣರಿಂದಂ ಸಂಪದಮನಾಳ್ವ
ಶಿವನ ಸದ್ಭಕ್ತಿಯಲ್ಲಿಯೆ ಸಫಲವೆಂದೆನಿಪ
ಭವನೊಲಿದು ನೆಲಸಿರ್ಪ ಸೆಜ್ಜೆ ತಾನೆಂದೆನಿಪ
ಬಳ್ಳಿಗಾವಿಯೆನಿಪ್ಪ ಪುರವರಂ ರಂಜಿಪುದಂ
ಪಲ್ಲವಿಪ ಶರಣಸಂಕುಳದಿಂ ವಿರಾಜಿಪುದು
ವಲ್ಲೀಪುರದ ನಾಗವಾಸಾಧಿಪತಿಯಪ್ಪ
ಸಲ್ಲಲಿತನಾಯಕನ ಸತಿಯ ಬಸುಱ್ೊಳಗೆ
ನವಯೌವನೆಯ ಗರ್ಭವಾಗಲುದಯಿಸಿ ತೊಳಗೆ
ಹೊಱಗೆ ಸಾಱುದುದವಯವಂ ಗರ್ಭಚಿಹ್ನಮಂ
ತುಱುಗಿದುದು ಲಾವಣ್ಯವೊಪ್ಪ ವಿಡಿದಂಗಮಂ
ಪೊಕ್ಕುಳುಣ್ಮುತ್ತಮಿರೆ [೪]

ಬಾಲ್ಯ ಸಡಿಲಿಸುತ್ತಿದ್ದಂತೆ ಅಲ್ಲಮ ಮೃದಂಗ ವಿದ್ಯೆಯಲ್ಲಿ ಪರಿಣತನಾಗುತ್ತಾನೆ. ದಿನವೂ ಗೊಹೇಶ್ವರನ ದೇವಾಲಯಕ್ಕೆ ಹೋಗಿ ಮೃದಂಗ ಬಾರಿಸತೊಡಗುತ್ತಾನೆ. ಒಮ್ಮೆ ಕಾಮಲತೆ 'ಸುವಿಟರ ಮೇಲೆ ಥಾಳಿ ಪೊಱಮಡುವಂತೆ' ಆ ದೇವಾಲಕ್ಕೆ ಬರುತ್ತಾಳೆ. ಅಲ್ಲಿ ಅಲ್ಲಮ ಮತ್ತು ಕಾಮಲತೆಯರ ನಡುವೆ ಪ್ರೇಮಾಂಕುರವಾಗುತ್ತದೆ. ಇಬ್ಬರಲ್ಲೂ ಪ್ರೇಮಾಂಕುರ ವಾಗಿರುವುದು ಸಖಿಯರಿಗೆ ತಿಳಿಯುತ್ತದೆ. ಆಗ ಸಖಿಯರು ಅವರಿಬ್ಬರನ್ನೂ ಸೆಜ್ಜೆಮನೆಯಲ್ಲಿ

ಸೇರಿಸುತ್ತಾರೆ. ಪ್ರೀತಿಯ ಬೆಸುಗೆಯಲ್ಲಿ ಅಲ್ಲಮ ಕಾಮಲತೆಯರು ಹಲಕೆಲವು ವತ್ಸರಗಳನ್ನು ನಿಮಿಷಗಳಂತೆ ಕಳೆಯುತ್ತಾರೆ. ಅಷ್ಟರಲ್ಲಿಯೇ ಕಾಮಲತೆಗೆ ಮಹಾ ಜ್ವರ ಬಂದೆರಗುತ್ತದೆ. ಕಾಮಲತೆ ಸಾಯುತ್ತಾಳೆ.

ಇಲ್ಲಿಯವರೆಗೆ ಕಥೆ ಬಹಳ ಅವಸರದಿಂದ ಸಾಗುತ್ತದೆ. ಈ ಭಾಗದಲ್ಲಿ ಅಲ್ಲಮನ ಬದುಕಿನ ಹಲವು ಘಟನೆಗಳು ಬರುತ್ತವೆ. ಅಲ್ಲಮ ನಾಗವಾಸಾಧಿಪತಿಯ ಸತಿಯ ಬಸುರಲ್ಲಿ ಹುಟ್ಟುತ್ತಾನೆ. ಬಾಲ್ಯ ಕಳೆದು ಯೌವ್ವನಕ್ಕೆ ಬರುತ್ತಾನೆ. ಮೃದಂಗ ವಿದ್ಯೆಯನ್ನು ಕಲಿಯುತ್ತಾನೆ. ಧನದತ್ತನ ಸತಿಯ ಬಸುರಲ್ಲಿ ಕಾಮಲತೆ ಹುಟ್ಟುತ್ತಾಳೆ. ಬೆಳೆದು ಯೌವನಕ್ಕೆ ಕಾಲಿರಿಸುತ್ತಾಳೆ. ಅಲ್ಲಮ ಕಾಮಲತೆಯರು ಪರಸ್ಪರ ಪ್ರೇಮಿಸುತ್ತಾರೆ...... ಹೀಗೆ ಹಲವು ಘಟನೆಗಳು ಜರುಗುತ್ತವೆ. ಆದರೆ ಯಾವ ಘಟನೆಯನ್ನೂ ಕವಿ ವಿಸ್ತಾರವಾಗಿ ಹೇಳುವ ಪ್ರಯತ್ನವನ್ನೇ ಮಾಡುವುದಿಲ್ಲ. ಒಂದು ಎರಡು ಸಾಲಿನಲ್ಲಿಯೇ ಎಲ್ಲವನ್ನೂ ಮುಗಿಸಿ ಬಿಡುತ್ತಾನೆ.

ನಿಂದಂತೆ ನಿಂದಳಲ್ಲಮನ ನಿಲವಂ ಕಂಡು
ಸಂದಳಾ ಹೊಸರೂಪು ರೇಖೆಗೆ ಮನಂಗೊಂಡು
ನೋಡುತಿರೆ ಬಾರಿಸುತೆ ಕೆಲಬಲಕೆ ಸಾರುತ್ತೆ
ನೋಡಿ ಭೋಂಕೆನಲಲ್ಲಮಂ ತಿರುಗಿ ಕಾಣುತ್ತೆ
ಹರಹರ ಮಱೆದನಲ್ಲಿ ಸುಗತಿಯಂ ಮುರಜಮಂ

ಹರಹರ ಮಱೆದನಲ್ಲಿ ಶಿವನುಮಮ್ ತನ್ನುಮಂ
ಕಂಟಕಿತವಾದನೆರಡುಂ ದಿಟ್ಟಿ ಮೈದೋಱಿ
ಗಂಟಿಕ್ಕಿದವು ನೋಟವವೆಯ ಕಾಹಂ ಮೀಱಿ
ಇಕ್ಕಿದೆರಡುಂ ಕೈಗಳಿಕ್ಕಿದಂದದೊಳಿರಲು
ಪಕ್ಕವಣಿಗರ ಮೇಲೆ ಜೋಲ್ದು ಮೂರ್ಛೆಗೆ ಸಲಲು [೫]

ಅಲ್ಲಮನ ಹುಟ್ಟಿಗೆ ಯಾವುದೋ ಒಂದು ಶಾಪದ ಕಾರಣವನ್ನು ಹರಿಹರ ನೀಡುತ್ತಾನೆ. ತಂದೆ ತಾಯಿಯರ ವಿಚಾರವಂತೂ ಇಲ್ಲವೇ ಇಲ್ಲ ಎನ್ನುವಂತಿದೆ. ಅಲ್ಲಮನ ತಂದೆಯನ್ನು "ವಲ್ಲೀಪುರದ ನಾಗವಾಸಾಧಿಪತಿಯಪ್ಪ ಸಲ್ಲಲಿತನಾಯಕನ........"[೬] ಎಂದು ತಿಳಿಸುತ್ತಾನೆ. ಆದರೆ ಅವನ ಹೆಸರನ್ನು ಸ್ಪಷ್ಟವಾಗಿ ತಿಳಿಸುವುದಿಲ್ಲ. ಅವನ ಇತಿವೃತ್ತವನ್ನು ಸಂಪೂರ್ಣ ಕೈಬಿಟ್ಟಿದ್ದಾನೆ. ತಂದೆಯ ವಿಚಾರ ಕುರಿತಂತೆ ಇಷ್ಟು ಮಾತ್ರವನ್ನಾದರೂ ಹೇಳಿದ್ದಾನೆ. ಆದರೆ ತಾಯಿಯ ಬಗೆಗೆ ಅಷ್ಟನ್ನೂ ಹೇಳುವುದಿಲ್ಲ. ನಾಗವಾಸಾಧಿಪತಿಯಪ್ಪ ಸಲ್ಲಲಿತನಾಯಕನ ಸತಿ ಎಂದು ಮಾತ್ರ ತಿಳಿಸುತ್ತಾನೆ. ಅವಳು ಯಾರು? ಯಾರ ಮಗಳು? ಇತ್ಯಾದಿ ವಿವರಗಳನ್ನು ನೀಡುವುದೇ ಇಲ್ಲ. ಆದರೆ ಅವಳು ಅಲ್ಲಮನನ್ನು ತನ್ನ ಬಸುರಲ್ಲಿ ಹೊತ್ತ ಸನ್ನಿವೇಶವನ್ನು ಮಾತ್ರ ಕೆಲಸಾಲುಗಳಲ್ಲಿ ವಿವರಿಸುತ್ತಾನೆ. ಅಲ್ಲಮ ಜನಿಸಿದ ನಂತರ ಅವನಿಗೆ ಅಲ್ಲಯ್ಯ ಎಂಬ ಹೆಸರನ್ನು ತಂದೆ ತಾಯಿಯರು ಇಟ್ಟರು ಎಂದು ಹೇಳಿ ಮುಂದೆ, ಅಲ್ಲಮನು ವಿರಹ ಸಂಕಟದಲ್ಲಿ ಸಿಕ್ಕಾಗ ಪರಿಜನರು ಅವನನ್ನು ಕರೆದುಕೊಂಡು ಬಂದು ತಂದೆ ತಾಯಿಯರಲ್ಲಿಗೆ ಬಿಟ್ಟರು. ತಂದೆ ತಾಯಿಯರು ಕಂದನ ಸ್ಥಿತಿಯನ್ನು ಕಂಡು ಮರುಗಿದರು ಎಂಬುದಾಗಿ ತಿಳಿಸಿ ಅಲ್ಲಿಗೆ

ತಂದೆ ತಾಯಿಯರ ವಿಚಾರವನ್ನು ಕೈಬಿಟ್ಟಿದ್ದಾನೆ. ತಂದೆ ತಾಯಿಯರು ಮಗನೊಂದಿಗೆ ಪ್ರೀತಿಯಿಂದ ಕಳೆದಿರಬಹುದಾದ ದಿನಗಳು, ಅವರು ಅನುಭವಿಸಿದ ಸುಖ–ದು:ಖಗಳು, ಎಷ್ಟು ಕಾಲ ಅವರು ಜೀವಿಸಿದ್ದರು? ಎಂಬ ವಿಚಾರಗಳನ್ನು ಸಂಪೂರ್ಣ ಕೈಬಿಟ್ಟಿದ್ದಾನೆ.

ನವಕುಮಾರಾಕನುದಯವಾಗಲುದ್ಯತನಾಗೆ
ಅನುವಾಗೆ ಶುಭದಿನ ಮುಹೂರ್ತಂಗಳೈತಂದು
ಜನಿಯಿಸುವ ಸಮಯಮಂ ಪಾರ್ದಿರುತ್ತಿರಲಂದು
ವಾಸ ವಾಶಾಂತರದೊಳಗರ್ಕನುದಯಿಸುವಂತೆ
ಭಾಸುರದ ಪಾಲ್ಗಡಲೊಳಿಂದು ಜನಿಯಿಸುವಂತೆ
ವಸುಧೆಯೊಳು ಸುರಕುಜದ ಸಸಿ ಪುಟ್ಟುವಂದದಿಂ
ಶಿಶುವೆನಿಸಿ ಪುಟ್ಟಿದಂ ನಿರ್ಮಾಯನೊಪ್ಪದಿಂ [೭]

ಅಲ್ಲಮನ ಬಾಲ್ಯದ ವಿಚಾರದ ಬಗೆಗೆ ಕೂಡ ಹರಿಹರ ವಿವರವಾಗಿ ಹೇಳುವ ಪ್ರಯತ್ನವನ್ನು ಮಾಡಿಲ್ಲ. ಕೇವಲ ಮೂರ್ನಾಲ್ಕು ಸಾಲುಗಳಲ್ಲಿಯೇ ಅವನ ಬಾಲ್ಯದ ದಿನಗಳನ್ನು ವರ್ಣಿಸಿಬಿಡುತ್ತಾನೆ.

ಗೊಗ್ಗೇಶ್ವರ ಪ್ರಸಾದದ ಬೆಣ್ಣೆಯಂ ತಂದು
ಓಗ್ಗುತ್ತಲಿಕ್ಕಿದರ್ಜನನಿ ಮೆಲ್ಲೈ ಎಂದು
ನಾಮಕರಣಂ ಜಗಕ್ಕಲ್ಲಯ್ಯನೆಂದಾಗೆ
ಭೂಮಿಗದು ನಿರ್ಮಾಯನೆಂಬ ಪೆಸರಂತಾಗೆ
ತೊಟ್ಟಿಲೊಳ್ಕೈಗಳೊಳು ಹೃತ್ಕಮಳದೊಳ್ಬೆಳೆದು
ದಟ್ಟಡಿಯಿಡುತ್ತೆ ಪರಿದಾಡುತ್ತೆ ಬೆಳೆಬೆಳೆದು
ಬೆಳೆದನಾತಂ ಶಿವಪದಕ್ಕೆ ಹೊಸ ತೊಡವೆನಿಸಿ
ಬೆಳೆದನಾತಂ ಭಕ್ತಿವಾರಿಧಿಗೆ ವಿಧುವೆನಿಸಿ [೮]

ಅವನಿಗೆ ಅಲ್ಲಯ್ಯ ಎನ್ನುವ ಹೆಸರು ಲೋಕಕ್ಕೆ ಪ್ರಸಿದ್ಧವಾಗುತ್ತದೆ. ಅಲ್ಲಮನ ಬಾಲ್ಯ ಹಾಗೂ ಅವನ ತಂದೆತಾಯಿಯರ ಚಿತ್ರವನ್ನು ಚಿತ್ರಿಸುವಲ್ಲಿ ಹರಿಹರ ಯಾವ ರೀತಿಯನ್ನು ಅನುಸರಿಸಿದ್ದಾನೋ, ಅದೇ ರೀತಿಯನ್ನು ಕಾಮಲತೆಯ ಸಂದರ್ಭದಲ್ಲೂ ಅನುಸರಿಸುತ್ತಾನೆ. ಕಾಮಲತೆಯ ಹುಟ್ಟನ್ನು 'ಧನದತ್ತನಬಲೆಯುದರದಿ ಪುಟ್ಟಿ.......' ಎಂದು ಒಂದೇ ವಾಕ್ಯದಲ್ಲಿ ತಿಳಿಸುತ್ತಾನೆ. ಧನದತ್ತ ಯಾರು? ಆತ ಏನಾಗಿದ್ದ? ಅವನ ಹೆಂಡತಿಯ ಹೆಸರಾದರೂ ಏನು? ಕಾಮಲತೆಯೊಂದಿಗೆ ಅವರ ಬದುಕು ಹೇಗೆ ಸಾಗುತ್ತಿತ್ತು? ಎಷ್ಟು ಕಾಲ ಬದುಕಿದ್ದರು? ಇತ್ಯಾದಿ ವಿಚಾರಗಳನ್ನು ಹರಿಹರ ಸಂಪೂರ್ಣ ಬಿಟ್ಟಿದ್ದಾನೆ. ಕೇವಲ ಎಂಟು ಹತ್ತು ಸಾಲುಗಳಷ್ಟರಲ್ಲೇ ಕಾಮಲತೆಯ ಹುಟ್ಟು, ಬಾಲ್ಯಗಳೆಲ್ಲವೂ ಸೇರಿಕೊಂಡಿವೆ.

ಆ ಪುರದ ಧನದತ್ತನಬಲೆಯುದರದೆ ಪುಟ್ಟಿ
ರೂಪಿನೊಳ್ ರತಿ ಸರಸ್ವತಿ ಗುಪ್ಪರಂ ಗಟ್ಟಿ

ಹೆಸರೆಸವ ಕಾಮಲತೆಯೆಂದೆಂಬ ನಾಮದಿಂ [೯]

ಹರಿಹರ ತಿಳಿಸುವಂತೆ ಅಲ್ಲಮ ಒಬ್ಬ ನಾಗವಾಸಾಧಿಪತಿಯ ಮಗ. ಮದ್ದಳೆ ಬಾರಿಸುವವನು. ಕಾಮಲತೆಯಾದರೋ ಧನದತ್ತನೆಂಬುವನ ಮಗಳು. ಇಬ್ಬರ ಅಂತಸ್ತುಗಳೂ ಬೇರೆ ಬೇರೆ. ಕಾಮಲತೆ ಅಲ್ಲಮನಿಗಿಂತಲೂ ಸುಸ್ಥಿತಿಯಲ್ಲಿ ಬದುಕಿರುವವಳು. ಆದರೆ ಗೊಹೇಶ್ವರ ದೇವಾಲಯದಲ್ಲಿ ಇಬ್ಬರೂ ಪರಸ್ಪರ ಅನುರಾಗಕ್ಕೆ ಒಳಗಾಗುತ್ತಾರೆ. ಕೂಡಲೇ ಸಖಿಯರೆಲ್ಲ ಸೇರಿ ಅಲ್ಲಮ ಕಾಮಲತೆಯರನ್ನು ಸಜ್ಜೆಮನೆಗೆ ಸೇರಿಸುತ್ತಾರೆ. ಅಲ್ಲಿ ಅಲ್ಲಮ ಕಾಮಲತೆಯರ ಪ್ರಣಯ ಜೀವನ ಪ್ರಾರಂಭವಾಗುತ್ತದೆ.

ಹರಹರ ಮಱಿದನಲ್ಲಿ ಸುಗತಿಯಂ ಮುರಜಮಂ
ಹರಹರ ಮಱಿದನಲ್ಲಿ ಶಿವನುಮವ್ ತನ್ನುಮಂ
ಕಂಟಕಿತವಾದನೆರಡುಂ ದಿಟ್ಟಿ ವ್ಯೆದೋಱಿ
ಗಂಟಿಕ್ಕಿದವು ನೋಟವೆವೆಯ ಕಾಹಂ ಮೀಱಿ
ಇಕ್ಕಿದೆರಡುಂ ಕೈಗಳಿಕ್ಕಿದಂದದೊಳಿರಲು
ಪಕ್ಕವಣೆಗರ ಮೇಲೆ ಜೋಲ್ದು ಮೂರ್ಚೆಗೆ ಸಲಲು [೧೦]

ಅಲ್ಲಮ ಮತ್ತು ಕಾಮಲತೆಯರ ನಡುವೆ ಪ್ರಣಯ ಜೀವನ ಪ್ರಾರಂಭವಾದದ್ದು ಸಹಜವಾಗಿಯೆ ಇದೆ. ಕವಿ ಅದನ್ನು ಚೆನ್ನಾಗಿಯೇ ನಿರೂಪಿಸಿದ್ದಾನೆ. ಆದರೆ ಅವರಿಬ್ಬರ ನಡುವೆ ಪ್ರಣಯ ಅಂಕುರಿಸಿದ ಸಂದರ್ಭದಲ್ಲಿ ಯಾವ ಘಟನೆಗಳೂ ಸಂಭವಿಸಲಿಲ್ಲವೇ? ಈ ಬಗ್ಗೆ ಹರಿಹರ ಯಾವ ಸುಳಿವನ್ನೂ ನೀಡುವುದಿಲ್ಲ. ಅವನ ಪ್ರಕಾರ ಎಲ್ಲವೂ ಸಾಂಗವಾಗಿ ನೆರವೇರುತ್ತದೆ. ಕಾಲಮಾನವನ್ನು ದೃಷ್ಟಿಯಲ್ಲಿಟ್ಟುಕೊಂಡು ನೋಡಿದಾಗ ಇದು ಸಾಧ್ಯವಿಲ್ಲ ಎನಿಸುತ್ತದೆ. ಏಕೆಂದರೆ ಅಲ್ಲಮ ಒಬ್ಬ ಸಾಮಾನ್ಯ ಮದ್ದಳೆ ಬಾರಿಸುವವನು. ಕಾಮಲತೆಯಾದರೊ ಧನದತ್ತನೆಂಬ ಶ್ರೀಮಂತನ ಮಗಳು. ಹಾಗಾಗಿ ಇಲ್ಲಿ ವರ್ಗಸಂಘರ್ಷ ನಡೆದಿರುವ ಸಾಧ್ಯತೆಯೂ ಇರುತ್ತದೆ. ಆದರೆ ಕವಿ ಈ ಬಗೆಗೆ ಏನನ್ನೂ ಹೇಳುವುದಿಲ್ಲ. ಹೋಗಲಿ, ಅಲ್ಲಮ ಕಾಮಲತೆಯರ ಪ್ರೇಮವನ್ನು ಅವರ ತಂದೆ ತಾಯಿಯರು ಒಪ್ಪಿದರೋ, ಬಿಟ್ಟರೋ ಎಂಬುವುದನ್ನೂ ತಿಳಿಸುವುದಿಲ್ಲ. ಹಲವು ವತ್ಸರಗಳ ಕಾಲ ಕಾಮಾನುರಾಗದಲ್ಲಿ ಸಜ್ಜೆ ಮನೆಯಲ್ಲಿದ್ದರು ಎಂಬುದಾಗಿ ತಿಳಿಸುತ್ತಾನೆ. 'ಕೊಂಡುನಡೆ ಇಬ್ಬರುಮನೆಮ್ಮ ಸಜ್ಜೆಯ ಮನೆಗೆ" ಕಳುಹಿಸುವ ಪ್ರಸ್ತಾಪ ಬರುತ್ತದೆ. ಆದರೆ ಹಲವು ಕಾಲದವರೆಗೆ ಸೆಜ್ಜೆಮನೆಯಲ್ಲಿ ಇವರ ಬದುಕು ಹೇಗೆ ಸಾಗುತ್ತಿತ್ತು? ಮದುವೆಯಾಗಿದ್ದರೇ? ಇಲ್ಲವೆ? ಹಲವು ಕಾಲದವರೆಗೂ ಇವರ ಪ್ರಣಯದ ಬದುಕನ್ನು ಯಾರೂ ಪ್ರಶ್ನಿಸಲಿಲ್ಲವೇ? ಈ ಅವಧಿಯಲ್ಲಿ ಕಾಮಲತೆ ಗರ್ಭಿಣಿಯಾಗಲಿಲ್ಲವೇ? ಮುಂತಾದ ವಿಚಾರಗಳನ್ನು ಕವಿ ಪ್ರಸ್ತಾಪಿಸುವುದೇ ಇಲ್ಲ. ಹಲವು ಕಾಲ ಪ್ರಣಯ ಸುಖವನ್ನು ಅನುಭವಿಸುತ್ತಿರಬೇಕಾದರೆ ಕಾಮಲತೆ ಮಹಾಜ್ವರ ಆವರಿಸಿ ಸಾವನ್ನಪ್ಪಿದಳು ಎಂಬುದಾಗಿ ಕವಿ ತಿಳಿಸುತ್ತಾನೆ.

ಕಾಮಲತೆಯಂ ಬಂದು ಪತ್ತಿತು ಮಹಾಜ್ವರಂ
ದೇವಲೋಕಕ್ಕೆ ನಡೆದಳು ಕಾಮಲತೆಯಂದು

ಆಗಳಾ ಜನನಿ ಜನಕರ್ಮುಜುಗಿ ಪೊಱೆಯಿಡಲು
ಸಾಗಿಪ ಸಖೀಜನಂ ಹರಣಗಳೆವುತ್ತಿರಲು [22]

ಇಲ್ಲಿ ಮಹಾಜ್ವರ ಕಾಮಲತೆಗೆ ತಗುಲಿ ಸತ್ತಿರಬಹುದಾದ ಸಾಧ್ಯತೆ ನಿಜವಿರಬಹುದು. ಆದರೆ ಈ ಮಹಾಜ್ವರ ಕಾಮಲತೆಗೆ ಆವರಿಸಿದ ಸಂದರ್ಭದಲ್ಲಿ ತಂದೆಯಾದ ಧನದತ್ತನಿಂದಾಗಲಿ ಅಥವಾ ಇತರ ಹತ್ತಿರದವರಿಂದಾಗಲಿ, ಕಾಮಲತೆಯನ್ನು ಉಪಚರಿಸುವ ಯಾವ ಕಾರ್ಯವೂ ನಡೆಯಲಿಲ್ಲವೇ? ಆ ಸಂದರ್ಭದಲ್ಲಿ ಅಲ್ಲಮನಾದರೂ ಏನು ಮಾಡುತ್ತಿದ್ದ? ಅವನ ಮಾನಸಿಕ ಒಳತೋಟಿ ಏನಾಗಿತ್ತು? ಸತ್ತಮೇಲೆ ಕಾಮಲತೆಯ ದೇಹವನ್ನೇನು ಮಾಡಿದರು? ಇತ್ಯಾದಿ ವಿಚಾರಗಳ ಬಗೆಗೆ ಹರಿಹರ ಏನನ್ನೂ ಹೇಳುವುದಿಲ್ಲ. ಕಾವ್ಯ ಅಸ್ಪಷ್ಟವಾಗಿ ಆತುರದಲ್ಲಿ ಸಾಗುತ್ತದೆ.

ಮೊದಲನೆಯ ಈ ಭಾಗದಲ್ಲಿ ಇಷ್ಟೆಲ್ಲ ಅಪೂರ್ಣತೆಗಳು ಇದ್ದರೂ ಕವಿ ತನ್ನ ಕಾವ್ಯದಲ್ಲಿ ಸತ್ವವನ್ನು ಉಳಿಸಿಕೊಂಡಿದ್ದಾನೆ. ತನ್ನ ನಿರೂಪಣಾ ಸಾಮರ್ಥ್ಯದಿಂದಾಗಿ ಕಾವ್ಯವನ್ನು ಮನೋಜ್ಞವಾಗಿಸಿದ್ದಾನೆ. ಅಲ್ಲಮ, ತಾಯಿಯ ಗರ್ಭದಲ್ಲಿರುವಾಗ ಅತ್ಯಂತ ಉಪಯುಕ್ತವಾದ ವರ್ಣನೆಯನ್ನು ಕವಿ ನೀಡುತ್ತಾನೆ. "ವಾಸವಾಶಾಂತರದೊಳಗರ್ಕನುದಯಿಸುವಂತೆ ಭಾಸುರದ ಪಾಲ್ಗಡಲೊಳಿಂದು ಜನಿಯಿಸುವಂತೆ ವಸುಧೆಯೊಳು ಸುರಕುಜದ ಸಸಿ ಪುಟ್ಟುವಂದದಿಂ......" ಎಂಬ ಹರಿಹರನ ಹೋಲಿಕೆಗಳು ಭವಿಷ್ಯದ ಅಲ್ಲಮನ ಭವ್ಯ ವ್ಯಕ್ತಿತ್ವವನ್ನು ಸೆರೆಹಿಡಿಯುತ್ತವೆ.

ಅಲ್ಲಮನ ಯೌವನದ ಸಂದರ್ಭವನ್ನೂ ಸಹ ಕವಿ ಮಿತಿಮೀರಿ ವರ್ಣಿಸುವ ಗೋಜಿಗೆ ಹೋಗುವುದಿಲ್ಲ. "ಕಾವಂಗೆ ಸಿಂಗರದ ಹುರುಡು ಹುಟ್ಟುತ್ತಮಿರೆ.........ವನಿತೆಯರ ಮನವನಿಕ್ಕುಳಿಗೊಳ್ವನಿವನೆನಿಪ" ಎಂಬಷ್ಟರಲ್ಲೇ ಅವನ ಯೌವನದ ತೇಜಸ್ಸನ್ನು ಚಿತ್ರಿಸುತ್ತಾನೆ. ಕಾಮಲತೆಯ ಯೌವನವನ್ನು ಚಿತ್ರಿಸುವಾಗಲೂ ಕವಿ ಇದೇ ಮಾರ್ಗ ಅನುಸರಿಸುತ್ತಾನೆ. ಮದನಶರವಿಕ್ಷುಧನುವಿಂದೆ ಪೊಱಮಡುವಂತೆ ಪಡೆದು ಸುವಿಟರ ಮೇಲೆ ದಾಳಿ ಪೊಱಮಡುವಂತೆ ಎಂಬ ಒಂದೆರಡೇ ವಾಕ್ಯದಲ್ಲಿ ಕವಿ ಕಾಮಲತೆಯ ತುಂಬಿದ ಯೌವನವನ್ನು ಬಣ್ಣಿಸುತ್ತಾನೆ. ಅವನ ವರ್ಣನೆಗಳಲ್ಲಿ ಸ್ವಲ್ಪವೂ ಅಶ್ಲೀಲವಿಲ್ಲ, ಅನೌಚಿತ್ಯವಿಲ್ಲ. ಆದರೆ ಕಥೆಯು ವೇಗವಾಗಿ ಸಾಗುತ್ತದೆ.

ಕಾಮಲತೆ ಮತ್ತು ಅಲ್ಲಮ ಪ್ರಥಮ ಬಾರಿಗೆ ಅನುರಾಗಕ್ಕೆ ಒಳಗಾಗುವ ಸನ್ನಿವೇಶವೂ ಕಥೆಯಲ್ಲಿ ಬಹಳ ಸೊಗಸಾಗಿದೆ. ಹಾಗೆಯೇ ಕವಿ ಅಲ್ಲಮ ಮತ್ತು ಕಾಮಲತೆಯರ ನಡುವಿನ ಪ್ರಣಯವನ್ನು ಸೊಗಸಾಗಿ ನಿರೂಪಿಸಿದ್ದಾನೆ. ಈ ನಿರೂಪಣೆಯಲ್ಲಿ ಕವಿ ಬಹಳಷ್ಟು ಎಚ್ಚರಿಕೆ ವಹಿಸಿದ್ದಾನೆ. ಅನೌಚಿತ್ಯವಾದ ಪದಗಳಾಗಲಿ, ವಾಕ್ಯವಾಗಲಿ ಬಾರದ ಹಾಗೆ ನೋಡಿ ಕೊಂಡಿದ್ದಾನೆ. ಕಾಮಲತೆ ಮತ್ತು ಅಲ್ಲಮರ ನಡುವಿನ ಅತಿಯಾದ ಪ್ರಣಯವೇ ಮುಂದೆ ಅಲ್ಲಮನ ಬದುಕಿನ ಹಾದಿಯ ಮಹತ್ವದ ತಿರುವಾದ್ದರಿಂದ ಕವಿ ಈ ಭಾಗವನ್ನು ರಮ್ಯವಾಗಿ ಚಿತ್ರಿಸಿದ್ದಾನೆ. ಆದರೂ ಅತಿರಮ್ಯವೆಂಬುದು ಕಂಡು ಬರುವುದಿಲ್ಲ. ವರ್ಣನೆ ಹಿತಮಿತವಾಗಿ ಮೂಡಿಬಂದಿದೆ.

ಬರೆದಂತೆ ಕಂಡರಸಿದಂತೆ ಕರುವಿಟ್ಟಂತೆ
ಮರುಳಂತೆ ಮಱೆದಿರ್ದರಂತೆ ಮರವಟ್ಟಂತೆ

---

ಉರವಣೆಯ ದು:ಖದೊಳಗೆಜಿಗಿ ಬಿಸುಸುಯ್ಯುತಂ
ಪರಿಪರಿಯ ವಿರಹಾಗ್ನಿಯಿಂದುರಿದು ಬೇವುತಂ [೧೨]

ಕಥೆಯ ಎರಡನೆಯ ಭಾಗ ಕಾಮಲತೆಯ ಸಾವಿನ ನಂತರದ್ದು. ಅವಳ ಸಾವಿನ ನಂತರ ಅಲ್ಲಮನಿಗೆ ವಿರಹ ಆವರಿಸುತ್ತದೆ. ವಿರಹ ವೇದನೆಯಲ್ಲಿ ನರಳುತ್ತಾನೆ. ಅವನ ಸಂಕಟವನ್ನು ನೋಡಲಾರದ ಜನ ಅವನನ್ನು ತಂದೆ ತಾಯಿಯರ ಬಳಿ ತಂದು ಬಿಡುತ್ತಾರೆ. ತಂದೆ ತಾಯಿಯರೂ ಅವನ ಸಂಕಟಕ್ಕೆ ಮರುಗುತ್ತಾರೆ.

ನಿಂದನಲ್ಲಮನೊಳಗೊಳಗಳಲ್ದು ಬಳಲುತಂ
ಸಂದ ನೇಹದ ಸದ್ಗುಣಂಗಳಂ ನೆನೆವುತಂ
ಕಾಮಲತೆ ಮತ್ತೆ ಮನಮಂ ಸುತ್ತಲಲ್ಲಮಂ
ಕಾಮಲತೆ ಕಾಮಲತೆಯೆನುತಿರ್ದನಲ್ಲಮಂ [೧೩]

ಅವನ ಬದುಕಿನಲ್ಲಿ ಶೂನ್ಯ ಆವರಿಸುತ್ತದೆ. ಆ ಶೂನ್ಯತೆಯಲ್ಲಿ ಒಮ್ಮೆ ಕಣಗಿಲೆಯ ತೋಟದಲ್ಲಿ ಕುಳಿತು ಚಿಂತಾಕ್ರಾಂತನಾಗಿರುತ್ತಾನೆ. ಆ ಚಿಂತೆಯಲ್ಲಿ ನೆಲವನ್ನು ಕೆರೆಯಲು ಹೊನ್ನ ಕಳಶವೊಂದು ಕಾಣಿಸುತ್ತದೆ. ತೆಗೆಯಲು ಪ್ರಯತ್ನಿಸುತ್ತಾನೆ. ಆಗುವುದಿಲ್ಲ. ಆ ಸಂಗತಿಯನ್ನು ರಾಜನಿಗೆ ತಿಳಿಸುತ್ತಾನೆ. ಪರಿಜನರ ಸಮೇತ ಬಂದ ಅರಸ ಆ ಜಾಗವನ್ನು ಅಗೆಯಿಸುತ್ತಾನೆ. ವಿಶಾಲವಾದ ದೇವಾಲಯವೊಂದು ಗೋಚರಿಸುತ್ತದೆ. ಬಾಗಿಲು ತೆರೆದು ಒಳಗೆ ಹೋಗುವ ಧೈರ್ಯ ಯಾರಿಗೂ ಇರುವುದಿಲ್ಲ. ಆಗ ಬದುಕೇ ಬೇಡವಾಗಿದ್ದ ಅಲ್ಲಮ ದೇವಾಲಯದ ಬಾಗಿಲು ತೆಗೆದು ಒಳಹೋಗುತ್ತಾನೆ. ಒಳಗೆ ಹೋಗುತ್ತಿದ್ದಂತೆಯೇ ಅಲ್ಲಮನಿಗೆ ದಿವ್ಯ ಜ್ಞಾನ ಅಂಕುರಿಸುತ್ತದೆ. ಗೊಹೇಶ್ವರನ ದರ್ಶನವಾಗುತ್ತದೆ. ಅಂಗೈಯಲ್ಲಿ 'ಅಮೃತಫಳ'ವನ್ನು ಪಡೆಯುತ್ತಾನೆ.

ಅರಳ್ದ ನಯುನದ್ವಯಂ ವಿಕಸಿತ ಕುಸುಮವಾಗೆ
ಕರತಳದ ಶಿವಲಿಂಗವಂದಮೃತ ಫಳವಾಗೆ
ಕಲ್ಪತರುವಿನ ತೆಜದೊಳಿರ್ದನಾ ಶಿವಯೋಗಿ
ಕಲ್ಪನೆಯ ವಶವಲ್ಲದಪ್ರತಿಮ ಶಿವಯೋಗಿ
ಕಣ್ಣಲ್ಲಿ ಜೀವಮಂ ಪಿಡಿದಿರ್ದ ಮಾಳ್ಕೆಯಿಂ
ತಿಣ್ಣವೆನೆ ಲಿಂಗಮಂ ಪಿಡಿದಿರ್ದನೊಲ್ಮೆಯಿಂ [೧೪]

ಅಲ್ಲಮನ ಸಾಧನೆಗೆ ಪುರಜನವೆಲ್ಲ ಕೌತುಕಪಡುತ್ತದೆ. ದಿವ್ಯಜ್ಞಾನ ಪಡೆದ ಅಲ್ಲಮ ಕ್ಷೇತ್ರ ಪರ್ಯಟನೆಯಲ್ಲಿ ತೊಡಗುತ್ತಾನೆ.

ಲಿಂಗಸೋಂಕಿಂದೆ
ರಾಗದಿಂದದಂಕುರಿಸಿ ನಳನಳಿಸಿ ಚಲ್ವಿಂದೆ
ಪೊಜಿಮಟ್ಟನಲ್ಲಮಂ ಗೋಗೇಶ್ವರಂ ಮೆಚ್ಚೆ

ಬೆಱಗಾಗಿ ನೋಡಲಮ್ಮದೆ ನೃಪಂ ಕಣ್ಮುಚ್ಚಿ
ಹೋಗುತಿರ್ದಂ ಲೊಂಗವೆತ್ತೆತ್ತಲೊಯ್ದತ್ತ
ಆಗುತಿರ್ದುದು ಕೌತುಕಂ ಪುರಜನಕ್ಕಿತ್ತ
ನೋಡುದೆತ್ತಣ ಕಾಮಲತೆಯೆತ್ತಣಲ್ಲಮಂ
ಕೂಡಿದುದು ಪುಣ್ಯಫಲವಿಂತಿವಂಗೆಲ್ಲಮಂ
ಎತ್ತಣದು ಕಳಸವೆತ್ತಣ ಶಿವಾಲಯವಿವಂ
ಎತ್ತಣದು ಶಿವ ಶಿವಜ್ಞಾನಸುಖದನುಭವಂ
ನಡೆದುದೇ ಬಟ್ಟೆಯಾದುದು ಶಿವನ ಮದಕರಿಗೆ
ನುಡಿದುದೇ ವೇದವಾದುದು ಲಿಂಗವಂತಂಗೆ [೧೫]

ಜ್ಞಾನಿ ಅಲ್ಲಮನು ಬಸವಣ್ಣನನ್ನು ಕಂಡು ಮಾತನಾಡಿಸುತ್ತಾನೆ.ಸಿದ್ಧರಾಮನನ್ನು ಕಂಡು ಬುದ್ಧಿ ಹೇಳುತ್ತಾನೆ. ಗೊಹೇಶ್ವರನ ದರ್ಶನ ಆದಮೇಲೆ ಬಸವಣ್ಣ ಮತ್ತು ಸಿದ್ಧರಾಮನನ್ನು ಅಲ್ಲಮ ಭೇಟಿ ಮಾಡಿದ ಸಂದರ್ಭವನ್ನು ಕವಿ ಚಿತ್ರಿಸಿದ್ದಾನೆ. ಹಾಗೆ ಬರುಬರುತ್ತ ಕದಳೀವನದ ಕಡೆ ಬರುತ್ತಾನೆ. ಭೈರವನಿಂದ ವಂದಿಸಿಕೊಳ್ಳುತ್ತಾನೆ. ಹೋಗುವ ಹಾದಿಯಲ್ಲಿ ಎದುರಾದ ಎಲ್ಲ ಗಿಡ, ಮರ, ಪ್ರಾಣಿ, ಪಕ್ಷಿ ಸಂಕುಲಗಳನ್ನು ಕೌತುಕದಿಂದ ನೋಡುತ್ತಾನೆ. "ಮುರಿದಿರ್ದ ಹಾವುಗಳ ಬಳ್ಳಿಯಂ ದಾಂಟುತಂ ನೆರೆದಿರ್ದ ವಿಷಕನ್ನಿಕೆಯರುಮಂ ನೋಡುತಂ ಉರಿಯ ಹಳ್ಳಂಗಳಂ ಹರುಷದಿಂ ದಾಟುತಂ........ಸಾವಿಲ್ಲದಿರ್ಪ ಸಿದ್ಧರ ಚೆಲ್ವ ಮೂರ್ತಿಯಂ" ನೋಡುತ್ತ ನಡೆಯುವಾಗ ಪರಮೇಶ್ವರನು ಅಲ್ಲಮನನ್ನು ಸ್ವಾಗತಿಸಿ ಅವನ ಮೊದಲಿನ ಹೆಸರಾದ ನಿರ್ಮಾಯ ಎಂಬುದರಿಂದಲೇ ಗಣಪದವಿ ನೀಡಿ ಗೌರವಿಸುತ್ತಾನೆ.

ಪ್ರಭುದೇವರ ಕಥೆಯ ಈ ಭಾಗದಲ್ಲಿ ಕೂಡ ಹರಿಹರ ಕವಿ ಹೇಳಬಹುದಾದ ಇನ್ನೂ ಹಲವು ವಿಚಾರಗಳನ್ನು ಹೇಳದೆ ಅವಸರದಿಂದ ಕಥೆಯ ನಿರೂಪಣೆ ಮಾಡಿಕೊಂಡು ಹೋಗಿರುವುದನ್ನು ಕಾಣುತ್ತೇವೆ. ಅಲ್ಲಮ ವಿರಹಯಾತನೆಯಲ್ಲಿ ನರಳುವಾಗ ಪರಿಜನರು ಅವನನ್ನು ಕರೆತಂದು ಅವನ ತಂದೆತಾಯಿಯರ ಹತ್ತಿರ ಬಿಟ್ಟರು ಎಂದು ಹರಿಹರ ನಿರೂಪಿಸುತ್ತಾನೆ. ಆದರೆ ವಿರಹದಿಂದ ಬಳಲುತ್ತಿರುವ ಮಗನನ್ನು ತಂದೆ ತಾಯಿಯರು ಹೇಗೆ ನೋಡಿಕೊಂಡು ಎಂಬುದರ ಬಗೆಗೆ ಒಂದು ಸಾಲನ್ನೂ ಬರೆಯುವುದಿಲ್ಲ. ಕಣಗಿಲೆ ತೋಟದಲ್ಲಿ ನೆಲವನ್ನು ಅಲ್ಲಮನು ಕೆರೆಯುತ್ತಾ ಕುಳಿತಿರುವ ಸಂದರ್ಭದಲ್ಲಿ ಕಾಣಿಸಿದ ಕಳಸವನ್ನು ತೆಗೆಯಲಾರದೆ ಅರಸನಿಗೆ ತಿಳಿಸಿದ ವಿಚಾರ ಬರುತ್ತದೆ. ಆದರೆ ಆ ಅರಸ ಯಾರು? ಎಂಬ ಬಗೆಗೆ ಹರಿಹರ ಮೌನ ತಾಳಿದ್ದಾನೆ.

ಅಲ್ಲಮನ ವಿರಹ ವರ್ಣನೆ ರಗಳೆಯ ಎರಡನೆಯ ಈ ಭಾಗ ಹಲವು ನ್ಯೂನತೆಗಳಿಂದ ಕೂಡಿದ್ದರೂ ಕಾವ್ಯ ತನ್ನ ಸೊಗಸನ್ನು ಕಳೆದುಕೊಂಡಿಲ್ಲ. ಅಲ್ಲಮನ ವಿರಹದ ಜೀವನ ಹಾಗೂ ಸಾಧನೆಯನ್ನು ಕವಿ ಮನೋಜ್ಞವಾಗಿ ಚಿತ್ರಿಸಿದ್ದಾನೆ.

ಕೌತುಕಂಬಡುತ್ತೆಲ್ಲಮಂ
ಕೇಳ್ದುನೆಱೆ ಹೋದ ಬಂದಘಟಿತದ ವೇಷಮಂ [೧೬]

---

ಕವಿ ನೀಡುವ ಅಲ್ಲಮನ ವಿರಹ ಚಿತ್ರ ಅತ್ಯಂತ ಸಹಜ ಎಂಬಂತೆ ಮೂಡಿಬಂದಿದೆ. ಅಲ್ಲಮ ಕಾಮಲತೆಗಾಗಿ ತನ್ನ ತನು, ಮನ, ಧನಗಳನ್ನೆಲ್ಲ ಅರ್ಪಿಸಿಕೊಂಡಿದ್ದವನು. ಆದರೆ ಇದ್ದಕ್ಕಿದ್ದಂತೆ ಮಹಾಜ್ವರ ಬಂದು ಆಕೆ ಸಾಯುತ್ತಾಳೆ. ಅನಿರೀಕ್ಷಿತವಾದ ಈ ಸಾವು ಅಲ್ಲಮನನ್ನು ಭೀಕರವಾಗಿ ಹಿಂಡುತ್ತದೆ. ಆ ಸಂದರ್ಭದಲ್ಲಿ ಅಲ್ಲಮನಲ್ಲಿ ಆಗಿರಬಹುದಾದ ಮಾನಸಿಕ ತೊಳಲಾಟವನ್ನು ಕವಿ ಹೀಗೆ ಮನೋಜ್ಞವಾಗಿ ಅಭಿವ್ಯಕ್ತಿಸಿದ್ದಾನೆ :

ಬರೆದಂತೆ ಕಂಡರಸಿದಂತೆ ಕರುವಿಟ್ಟಂತೆ
ಮರುಳಂತೆ ಮಱೆದಿರ್ದರಂತೆ ಮರವಟ್ಟಂತೆ
ಉರವಣೆಯ ದುಃಖದೊಳಗೆಱಗಿ ಬಿಸುಸುಯ್ಯುತಂ
ಪರಿಪರಿಯ ವಿರಹಾಗ್ನಿಯಿಂದುರಿದು ಬೇವುತಂ
ನಿಂದನಲ್ಲಮನೊಳಗೊಳಗಗಳಲ್ದು ಬಳಲುತಂ
ಸಂದನೇಹದ ಸದ್ಗುಣಂಗಳಂ ನೆನೆವುತಂ
ಕಾಮಲತೆ ಮತ್ತೆ ಮನಮಂ ಸುತ್ತಲಲ್ಲಮಂ
ಕಾಮಲತೆ ಕಾಮಲತೆಯೆನುತಿರ್ದನಲ್ಲಮಂ [೧೭]

ಮನದೊಳಲ್ಲಮನತಿ ವಿರಕ್ತಿಯಂ ಕೈಕೊಂಡು
ಬೆರಲಿಲ್ಲ ಕಿವಿಯಿಲ್ಲ ಮುಡುಹು ಮುಂದಲೆಯಿಲ್ಲ
ಉರವಿಲ್ಲ ಮೂಗಿಲ್ಲ ಸತಿ ಕಾಮಲತೆಯಿಲ್ಲ
ಇನ್ನೇಕೆ ದೇಹದಭಿಲಾಷೆ ಛಿಃ ತೆಗೆಯೆಂದು
ತನ್ನ ಮನದೊಳಗೆ ನಿಶ್ಚಯಿಸಿ ಭರದಿಂ ಬಂದು
ಬೆಸಸು ಬೆಸಸಾನೆ ಪೊಕ್ಕಪೆನೆಂದು ನುಡಿವುತಿರೆ
ಪೊಸತು ಪೊಸತೆಂದರಸನಂದು ಬೆಱಗಾಗುತಿರೆ [೧೮]

ಕವಿ ಅಲ್ಲಮನ ವಿರಹವನ್ನು ಚಿತ್ರಿಸುವಷ್ಟೇ ಸಮರ್ಥವಾಗಿ ಅವನ ಸಾಧನೆಯನ್ನೂ ಚಿತ್ರಿಸುತ್ತಾನೆ. ದೇವಾಲಯವನ್ನು ಅಲ್ಲಮ ಪ್ರವೇಶಿಸುತ್ತಿದ್ದಂತೆಯೇ ಕರತಲದಲ್ಲಿ ಅಮೃತಫಳ ಬರುತ್ತದೆ. ಶಿವಲಿಂಗವು ಅಲ್ಲಮನ ಕೈಸೇರುತ್ತಿದ್ದಂತೆಯೇ ಅನಿಮಿಷಯ್ಯನ ಪ್ರಾಣ ಹೋಗುತ್ತದೆ. ಆಗ ಅಲ್ಲಮ "ಲಿಂಗ ಸೋಂಕಿಂದೆ ರಾಗದಿಂದಂಕುರಿಸಿ ನಳನಳಿಸಿ ಚಲ್ವಿಂದೆ ಪೊಱಮಟ್ಟನಲ್ಲಮಂ ಗೊಗೇಶ್ವರಂ ಮೆಚ್ಚೆ ಬೆರಗಾಗಿ ನೋಡಲಮ್ಮನದೆ ನೃಪ ಕಣ್ಮುಚ್ಚೆ" ಲಿಂಗ ಎತ್ತೆತ್ತ ಹೋಗುತ್ತದೆಯೋ ಅತ್ತತ್ತ ನಡೆಯುತ್ತಾನೆ. ದೇಹಾದಿ ಕರಣಗಳನ್ನು ಮೀರಿದ ಅಲ್ಲಮನಿಗೆ ಸಕಲ ತತ್ವಗಳೂ ಕರತಲಾಮಲಕವಾಗುತ್ತವೆ. ಶಶಿ ರವಿಯಂತೆ ಬೆಳಗತೊಡಗಿದ ಅವನು ಉಸುರಿಲ್ಲದ ಪ್ರರಬ್ರಹ್ಮನಾಗಿ ಬಿಚ್ಚಿದ ಮುಡಿಯನ್ನು ಅರಿಯದೆ, ಒಡನೆ ಬರುವವರನ್ನು ಲೆಕ್ಕಿಸದೆ, ಹೊಗಳುವವರು ತೆಗಳುವವರನ್ನು ಅರಿಯದೆ, ಆಳು ಅರಸ ಎಂಬುದನ್ನು ಅರಿಯದೆ, ಮುನ್ನಡೆಯುತ್ತಾನೆ. ಅವನ ಬರವಿಗೆ ಗಿಳಿ ಕೋಗಿಲೆಗಳು ಸುಸ್ವರಗೈಯ್ಯುತ್ತವೆ. ಆತ ನಡೆದುದೇ ದಾರಿ ನುಡಿದುದೇ ವೇದವಾಗುತ್ತವೆ. ಹುಲಿ, ಹುಲ್ಲೆ, ಫಣಿ, ಸಿಂಹ, ಆನೆಗಳೆಲ್ಲ ವೈರವನ್ನು ಮರೆತು ಒಂದಾಗುತ್ತವೆ. ಗಿರಿ ಗಹ್ವರ, ತರುನಿಕಾಯ, ಚಂದ್ರಕಾಂತ ಶಿಲೆ, ಇಂದ್ರ ನೀಲಮಣಿ, ಮಲ್ಲಿಗೆ ಮಾಮರ, ಕೇದಗೆ, ಸಂಪಿಗೆ...... ಹೀಗೆ ಸರ್ವದಲ್ಲೂ ಅಲ್ಲಮನೇ ನೆಲೆಸುತ್ತಾನೆ.

ಅವನು ಎಲ್ಲಿರುತ್ತಾನೆಯೋ ಅಲ್ಲಿಯೇ ವಸಂತಮಾಸ, ಎಲ್ಲಿರುತ್ತಾನೆಯೋ ಅದೇ ದಿವ್ಯ ಕ್ಷೇತ್ರವಾಗುತ್ತದೆ.

ಅಲ್ಲಮ ತನ್ನ ಸಾಧನೆಯ ಸಿದ್ಧಿಯನ್ನು ಮುಟ್ಟಿದ ಈ ಹಂತದಲ್ಲಿ ಹರಿಹರ ಪ್ರಕೃತಿಯನ್ನು ಯಥೇಚ್ಛವಾಗಿ ಬಳಸಿಕೊಂಡಿದ್ದಾನೆ. ಪ್ರಕೃತಿಯ ವರ್ಣನೆಯ ಮೂಲಕವೇ ಅಲ್ಲಮನ ಮಹೋನ್ನತ ವ್ಯಕ್ತಿತ್ವವನ್ನು ಚಿತ್ರಿಸುತ್ತಾನೆ. ಯಾವ ಭಾವಗಳು ಭಾಷೆಗೆ ಎಟಕುವುದಿಲ್ಲವೋ ಅಂಥ ಭಾವಗಳನ್ನು ಪ್ರಕೃತಿಯು ಕಟ್ಟಿ ಕೊಡುತ್ತದೆ ಎಂಬುದನ್ನು ಹರಿಹರ ಬಲ್ಲವನಾಗಿದ್ದಾನೆ. ಅಂತೆಯೇ ಅವನು ಪ್ರಕೃತಿಯನ್ನು ಯಥೇಚ್ಛವಾಗಿ, ಔಚಿತ್ಯಪೂರ್ಣವಾಗಿ ಬಳಸಿಕೊಂಡಿದ್ದಾನೆ.

ಅಲ್ಲಿ ಬರುತಿರೆ ಭೈರವಮಂ ಕಂಡು ಕೈಮುಗಿದು
ಅಲ್ಲಮಂ ಕಾರಣಿಕನೆಂದು ಮನದೊಳಗಱಿದು
ತೋಱಿದಂ ಶಿವನಲ್ಲಿಗೊಯ್ವ ಸೈವಟ್ಟೆಯಂ
ಮೀಱಿ ಬರುತಿರಲಲ್ಲಮಯ್ಯನತಿನಿಷ್ಠೆಯಿಂ [೧೮]

ಹರಿಹರನ ಪ್ರಭುದೇವರ ರಗಳೆಯನ್ನು ಸಮಗ್ರವಾಗಿ ಗಮನಿಸಿದಾಗ ಶಿವನ ಮಹಿಮೆಯನ್ನು ಸಾರುವ ಏಕಮಾತ್ರ ಉದ್ದೇಶದಿಂದ ಹರಿಹರ ಈ ಕಥೆಯನ್ನು ಬರೆದಂತೆ ಕಂಡು ಬರುತ್ತದೆ. ಕವಿ ಆ ಉದ್ದೇಶದಲ್ಲಿ ಸಫಲವೂ ಆಗಿದ್ದಾನೆ. ಕಥಾನಾಯಕನಾದ ಅಲ್ಲಮ ಕಾಮಲತೆಯ ಪ್ರೇಮಪಾಶಕ್ಕೆ ಸಿಕ್ಕಿ ಕೊನೆಗೆ ಕಾಮಲತೆಯನ್ನು ಕಳೆದುಕೊಂಡು ಅವಳದೇ ಚಿಂತೆಯಲ್ಲಿ ಮಗ್ನನಾಗಿರುತ್ತಾನೆ. ಅವಳ ಚಿಂತೆಯಲ್ಲದೆ ಅವನಿಗೆ ಬೇರೆ ಪ್ರಜ್ಞೆಯೇ ಇಲ್ಲ. ಆ ಅವಸ್ಥೆಯಲ್ಲಿ ಸಾವನ್ನು ಬಯಸಿ, ಯಾರೂ ಹೋಗಬಾರದ ದೇವಾಲಯವನ್ನು ಪ್ರವೇಶಿಸುತ್ತಾನೆ. ಆದರೆ ಅಲ್ಲಮ ಬಯಸಿದಂತೆ ಆಗುವುದಿಲ್ಲ. ಸಾವಿಗೆ ಬದಲಾಗಿ ಪಾಳು ದೇಗುಲದೊಳಗೆ ಅನಿಮಿಷಯ್ಯನ ದರ್ಶನವಾಗುತ್ತದೆ. ಅನಿಮಿಷಯ್ಯ ಅಲ್ಲಮನ ಕರತಳದಲ್ಲಿ ಲಿಂಗವನ್ನಿರಿಸಿ ತಾನು ಮಾಯವಾಗುತ್ತಾನೆ. ಅಲ್ಲಿಂದ ಅಲ್ಲಮನ ಬದುಕು ಬೇರೆಡೆಗೆ ಸಾಗುತ್ತದೆ. ಮಹಾ ಪ್ರೇಮಿಯಾದ ಅಲ್ಲಮ ಮಹಾಜ್ಞಾನಿಯಾಗುತ್ತಾನೆ, ದಿವ್ಯ ಜ್ಞಾನಿಯಾಗುತ್ತಾನೆ. ಶಿವನ ಕರುಣೆಯಿಂದ ಅಲ್ಲಮನನ್ನು ದಿವ್ಯ ಜ್ಞಾನಿಯನ್ನಾಗಿ ಮಾಡುವುದೇ ಹರಿಹರ ಕವಿಯ ಮುಖ್ಯ ಉದ್ದೇಶವೂ ಆಗಿದೆ. ಅದನ್ನು ಕವಿ ಯಶಸ್ವಿಯಾಗಿ ನಿರ್ವಹಿಸಿದ್ದಾನೆ. ಈ ಉದ್ದೇಶವೇ ಹರಿಹರನ ಕಾವ್ಯದಲ್ಲಿ ಪ್ರಭುದೇವರ ಚಾರಿತ್ರಿಕವಾದ ವಿಚಾರಗಳು ಕಾಣಿಸಿಕೊಳ್ಳದಿರಲು ಕಾರಣವೂ ಆಗಿದೆ ಎಂದರೆ ತಪ್ಪಾಗಲಾರದು. ಒಂದು ವೇಳೆ ಚಾರಿತ್ರಿಕ ವಿಚಾರಗಳನ್ನು ಕಾವ್ಯದಲ್ಲಿ ತಂದಿದ್ದರೆ ಕವಿಯ ಉದ್ದೇಶಕ್ಕೆ ಅನಗತ್ಯ ಹಿನ್ನಡೆಯಾಗುವುದರಲ್ಲಿ ಸಂಶಯವಿಲ್ಲ. ಒಟ್ಟಿನಲ್ಲಿ 'ಪ್ರಭುದೇವರ ರಗಳೆ' ಹರಿಹರನ ಉತ್ತಮ ಕಾವ್ಯಗಳಲ್ಲಿ ಒಂದು ಎಂಬುದರಲ್ಲಿ ಅನುಮಾನವಿಲ್ಲ. ಕವಿಯ ಔಚಿತ್ಯ ಪ್ರಜ್ಞೆಗೆ ಈ ರಗಳೆ ಉತ್ತಮ ಉದಾಹರಣೆಯಾಗಿದೆ.

## ಆ) ಪ್ರಭುಲಿಂಗ ಲೀಲೆ : ರಚನೆಯ ಹಿನ್ನಲೆ, ಕಥಾವಸ್ತು

ಚಾಮರಸನ 'ಪ್ರಭುಲಿಂಗಲೀಲೆ' ಕನ್ನಡ ಸಾಹಿತ್ಯದಲ್ಲಿ ಒಂದು ವಿಶಿಷ್ಟವಾದ ಮತ್ತು ಅನನ್ಯವಾದ ಕೃತಿ. ಅಲ್ಲಮಪ್ರಭುವಿನ ವೈರಾಗ್ಯ ಜೀವನವನ್ನೂ ಯೋಗ ಸಾಧನೆಯ ಮಹತ್ವವನ್ನೂ ಚಿತ್ರಿಸುವಲ್ಲಿ ಚಾಮರಸನು ತನ್ಮಯನಾಗಿದ್ದು, ಪೌರಾಣಿಕ ಕಲ್ಪನೆಯಿಂದ ತತ್ತ್ವಚಿಂತನೆಗೆ ಹೊಸ ಮೆರಗು ನೀಡಿರುವುದು ಕಾವ್ಯದ ಒಂದು ವಿಶೇಷವಾಗಿದೆ. 'ಅಲ್ಲಮಪ್ರಭು ಸಂಪ್ರದಾಯದ ಸಲ್ಲಲಿತ ಸನ್ಮಾರ್ಗವನ್ನು' ತಿಳಿಸಲುದ್ಯುಕ್ತನಾದ ಚಾಮರಸನು ಮಾಯಾಕೋಲಾಹಲನಾಗಿದ್ದುದನ್ನು ಕಾವ್ಯದ ಪ್ರಾರಂಭದ ಭಾಗದಲ್ಲಿ ವಿವರವಾಗಿಯೇ ಚಿತ್ರಿಸಿದ್ದಾನೆ.[೨೦] ಹರಿಹರನ ಪ್ರಭುದೇವರ ರಗಳೆಯಲ್ಲಿ ಈ ಭಾಗವನ್ನು ವಿವರವಾಗಿಯೇ ಚಿತ್ರಿಸಿದ್ದಾನೆ. ಹರಿಹರನ ಪ್ರಭುದೇವ ರಗಳೆಯಿಂದ ಭಿನ್ನವಾದ ಇಲ್ಲಿಯ ನಿಲುವು ಅಲ್ಲಮನ ಮೇರು ಸದೃಶವಾದ ವ್ಯಕ್ತಿತ್ವಕ್ಕೆ ಒಂದು ಪೀಠಿಕೆಯಂತಿದೆ. ಇಲ್ಲಿಯ ಸನ್ನಿವೇಶ ಮತ್ತು ಸಂದರ್ಭಗಳಲ್ಲಿ ನಾಟಕೀಯತೆ ಒಡೆದು ಕಾಣುತ್ತದೆ. ಲೀಲಾವಿನೋದವೂ ಬೆರೆತುಕೊಂಡಿದೆ. ಶೃಂಗಾರದ ಸನ್ನಿವೇಶವನ್ನು ಚಿತ್ರಿಸುತ್ತಿರುವಂತೆಯೇ ತಾಮಸದಿಂದ ಸಾತ್ವಿಕದ ಕಡೆಗೆ ಕಾವ್ಯ ಚಲಿಸತೊಡಗುತ್ತದೆ. ಮಾಯೆಯ ಸೋಲು, ವಿಮಳೆಯ ಆಗಮನ, ಪ್ರಭುವಿನ ನಿಶ್ಚಲವಾದ ನಿಲುವು ಇತ್ಯಾದಿಗಳು ಗಮನ ಸೆಳೆಯುತ್ತವೆ. ಪ್ರಭುವಿಗೆ ಐತಿಹಾಸಿಕ ವ್ಯಕ್ತಿತ್ವವಿದ್ದರೂ ಕಲ್ಪಕತೆಯ ಮೆರುಗಿನಲ್ಲಿಯೇ ಕಾವ್ಯ ಕುತೂಹಲಾಸಕ್ತಿಯನ್ನು ಕೆರಳಿಸುತ್ತ ಸಾಗುತ್ತದೆ. "ಪ್ರಭುಲಿಂಗಲೀಲೆ ಪ್ರಭುಲಿಂಗನು ಅಲ್ಲಮನ ರೂಪದಲ್ಲಿ ಸಾಕಾರಗೊಂಡು ಭಕ್ತೋದ್ಧಾರಕ್ಕಾಗಿ ನಡೆಸಿದ ಲೀಲೆಗಳು ಎಂದೂ ಗ್ರಹೀತವಾಗುತ್ತವೆ. ಚಾಮರಸನು ಪ್ರಭುವನ್ನು ಸಾಮಾನ್ಯನಂತೆ ಕಾಣದೆ ಅಲೌಕಿಕನಂತೆ ಕಂಡಿರುವನು"[೨೧]

ಮಂಗಳಾಚರಣ :

ಕವಿಯ ಅನನ್ಯ ಶ್ರದ್ಧೆ ಮತ್ತು ಕಾವ್ಯ ವಸ್ತುವಿನ ವಿಶೇಷತೆಗಳನ್ನು ಇಲ್ಲಿಯ ಪದ್ಯಗಳು ತಿಳಿಸಿಕೊಡುತ್ತವೆ. ಪ್ರಭುಲಿಂಗಲೀಲೆ ಕೃತಿಯಲ್ಲಿನ ಮಂಗಳಾಚರಣ ಭಾಗದಲ್ಲಿ ಹಿರಿಯರೆಲ್ಲರನ್ನು ಸ್ತುತಿಸುವುದು ಮುಖ್ಯವಾಗಿ ಗೋಚರಿಸುತ್ತದೆ. ಬಸವಣ್ಣ, ಚನ್ನಬಸವಣ್ಣ ಸಿದ್ಧರಾಮ, ಅಕ್ಕಮಹಾದೇವಿ, ಮಡಿವಾಳ ಮಾಚಿದೇವಯ್ಯ, ಮರುಳ ಶಂಕರದೇವ, ಕಿನ್ನರಿಯ ಬೊಮ್ಮಣ್ಣ, ಏಲೇಶ್ವರ ಕೇತಯ್ಯ, ಗಾನದ ಕನ್ನಪಯ್ಯ – ಈ ಮಹಾಶರಣರುಗಳಿಗೆ ಶರಣಾಳ ವೈರಾಗ್ಯಮೂರ್ತಿಯಾದ ಅಲ್ಲಮನು ಸಾರಿದ ಸನ್ಮಾರ್ಗವನ್ನು ಎಲ್ಲರೂ ತಿಳಿಯುವ ಹಾಗೆ ಹೇಳುವುದಾಗಿ ಕವಿಯು ಭಿನ್ನವಿಸುತ್ತಾನೆ. ಕಾವ್ಯದ ಧೋರಣೆಯನ್ನು ತಿಳಿಸುತ್ತಾನೆ.

ಸತ್ತವರ ಕಥೆಯಲ್ಲ ಜನನದ
ಕುತ್ತದಲಿ ಕುದಿಕುದಿದು ಕರ್ಮದ
ಕತ್ತಲೆಗೆ ಸಿಲುಕುವರ ಸೀಮೆಯ ಹೊಲಬು ತಾನಲ್ಲ
ಹೊತ್ತು ಹೋಗದೆ ಪುಂಡರಾಲಿಪ
ಮತ್ತಮತಿಗಳ ಗೋಷ್ಠಿಯಲ್ಲಿದು
ಸತ್ಯಶರಣರು ತಿಳಿವುದೀ ಪ್ರಭುಲಿಂಗಲೀಲೆಯನು[೨೨]

## ಪಾರ್ವತೀ ಪರಮೇಶ್ವರ ಸಂವಾದ :

ಕೈಲಾಸದಲ್ಲಿ ಪಾರ್ವತಿ-ಪರಮೇಶ್ವರರು ಮಾತನಾಡುತ್ತ ಕುಳಿತಾಗ, ಪಾರ್ವತಿಯು ಪರಮೇಶ್ವರನಿಗೆ ಆತನ ಒಡ್ಡೋಲಗದ ಮಹಾಘನಮಹಿಮರು ಭವಕೆ ಬಾರದೆ ನಿತ್ಯ ಸುಖದಿಂದಿರುವರೋ ಹೇಗೆ ಎಂದು ಕೇಳಿದಾಗ ಅವರೂ ಭವಕೆ ಬರಬೇಕಾಗುತ್ತದೆಂದು ತಿಳಿಸುತ್ತ, ಅಲ್ಲಮಪ್ರಭುವಿನ ಮಹಿಮೆಯನ್ನು ಕೊಂಡಾಡುವನು. ಆತನ ಮಹಿಮೆಯನ್ನು ಪರೀಕ್ಷಿಸಲು ಪಾರ್ವತಿಯು ಸಿದ್ಧಳಾಗುವಳು. ಈ ಸಂದರ್ಭವೇ ಪ್ರಭುಲಿಂಗಲೀಲೆಯ ಕತೆಗೆ ಬೀಜವಾಗಿದೆ.

ಶಿವನನ್ನು ಗಿರಿಜೆ ಶ್ರೇಷ್ಠವಾದ ನಿತ್ಯ ನಂದ ಸುಖವು ಸಿಗುವ ರೀತಿಯಾವುದೆಂದು ಕೇಳುವ ಮೂಲಕ ಸಂವಾದವು ಆರಂಭವಾಗುತ್ತದೆ. ಶಿವ ಅದನ್ನು ತಿಳಿಸುತ್ತಾನೆ. ಅಲ್ಲಮನನ್ನು ಅರಿಯಲು ಗಿರಿಜೆ ಮಾಯೆಯನ್ನು ಭೂಲೋಕಕ್ಕೆ ಕಳುಹಿಸುತ್ತಾಳೆ. ಪಾರ್ವತಿಯ ತಾಮಸ,ರಾಜಸ ಸಾತ್ವಿಕ ಗುಣಗಳು ಹೆಸರಾಂತ ಸ್ತ್ರೀರೂಪವನ್ನು ಹೊಂದಿ ಆಕೆಯ ಆಜ್ಞೆಯನ್ನು ನಿರೀಕ್ಷಿಸುತ್ತಾ ಸೇರಿಕೊಂಡರು.

ಬೆಸನ ಪಾರುವ ಪಾರ್ವತಿಯ ತಾ
ಮಸರಜ:ಸಾತ್ವಿಕಗುಣಂಗಳು
ಪೆಸರು ವಡೆದಬಲಾಕೃತಿಯಲೋಲಗಿಸಿಕೊಂಡಿಹವು
ಎಸೆವ ಮಾಯಾನಾಮವೇ ತಾ
ಮಸಗುಣಾನ್ವಿತೆಯಾಗಿ ಮಿಗೆ ರಂ
ಜಸಿದಳವರೊಳು ಮಂಗಳೆಯ ಮನ್ನಣೆಯ ಮಹಿಮೆಯಲಿ [೨೩]

ಶಿವನೆ ನಿನ್ನೊಡ್ಡೋಲಗದೊಳೊ
ಪ್ಪುವ ಮಹಾಘನಮಹಿಮರೆಲ್ಲರು
ಭವಕೆ ಬಾರದೆ ನಿತ್ಯ ಸುಖದಿಂದಿಪ್ಪರೋ ಮೇಣು
ಇವರಿಗೆಯು ನೆಲಯಿಲ್ಲವೋ ಪೇ
ಳಿವರವಸ್ಥೆನೆನುತ ಕೇಳಲು
ಶಿವೆಗೆ ತಿಳಿವಂದದಲಿ ಬಳಿಕಾ ಶಂಭುವಿಂತೆಂದ [೨೪]

ಗಿರಿಜೆಯಹುದೌ ನಿನ್ನ ಬುದ್ಧಿಯ
ಪರಿಯದೊಳ್ಳಿಹ ಪ್ರಶ್ನೆಯಾಯಿತು
ಹರಿವಿರಂಚಿಗಳಾದಿಯಾದವರಾದೊಡೆಯು ತುದಿಗೆ
ವಿರಚಿಸುತ್ತಿಹ ನಾಮರೂಪಗ
ಳೊರೆದ ಸತ್ಕ್ರಿಯೆಯಿದ್ದುವಾದೊಡೆ
ದೊರಕಲಱಿಯದು ನಿತ್ಯ ಸುಖವಗಜಾತೆ ಕೇಳೆಂದ. [೨೫]

ಒಂದಾನೊಂದು ದಿನ "ಪರಕಲಿಸಿ ದಂತಚ್ಛವಿಯ ಬೆಳುದಿಂಗಳನು ಸುರಿವಾ ಕರ ಚೆಲುವ ಬಾಯ್ದೆಱೆಯ ಪರಮೇಶ್ವರಿ" ತನ್ನ ಪತಿಯನ್ನು ಕುರಿತು "ಶಿವನೆ, ನಿನ್ನೊಡ್ಡೋಲಗದೊಳೊಪ್ಪುವ

ಮಾಹಾ ಘನಮಹಿಮರೆಲ್ಲರು ಭವಕೆ ಬಾರದೆ ನಿತ್ಯ ಸುಖದಿಂದಿಪ್ಪರೋ ಮೇಣು ಇವರಿಗೆಯು ನೆಲೆಯಿಲ್ಲವೋ?" ಎಂದು ಕೇಳಿದಳು. ಆಗ ಶಿವನು ನಾಮರೂಪ ಕ್ರಿಯೆಗಳನ್ನು ಗೆಲ್ಲಬಲ್ಲವರಿಗೆ ಮಾತ್ರ ನಿತ್ಯಸುಖವೆಂದೂ, ಅದಕ್ಕಾಗಿ ಭೂಮಿಯಲ್ಲಿ ಮಾನವ ಶರೀರದಿಂದ ಜನಿಸಿ ಸಾಧನೆ ಮಾಡಬೇಕೆಂದೂ ಹೇಳುವನು. ಇದು ಭೂಮಿಯಲ್ಲಿ ಮುಂದೆ ಮಾಯೆಯ ಹುಟ್ಟಿನ ಸೂಚನೆಯನ್ನು ನೀಡುತ್ತದೆ. ತದನಂತರ ಪಾರ್ವತಿಗೆ ಶಿವನು ಈ ರೀತಿಯಾಗಿ ಹೇಳಿದನು. "ಮಾನಿನಿಯೇ ಕೇಳು, ಏನು ಹೇಳಲಿ ಹಿಂದೆ ಸುಜ್ಞಾನಿ-ನಿರಹಂಕಾರರೆಂಬ ದಂಪತಿಗಳು (ಮಕ್ಕಳಿಗಾಗಿ ಹಂಬಲಿಸಿ) ಭಂಗಗೊಳ್ಳದಂತೆ ತಪಸ್ಸನ್ನು ಮಾಡಲು, ನನ್ನ ಸ್ವರೂಪವು ಅವರ ಮಗನ್ನೆನ್ನುವ ರೀತಿಯಲ್ಲಿ ಅಲ್ಲಮನೆಂಬ ಹೆಸರಿನಲ್ಲಿ ತಾನೇ ಸುಳಿಯಿತು. ಆ ಮಹಾತ್ಮನಲ್ಲಿ ತಿಳಿಯಬೇಕಾದ್ದನ್ನು ತಿಳಿಯುವುದು". ಆ ಮಾತಿಗೆ ಗಿರಿಜೆ, ಅಲ್ಲಮಪ್ರಭುವೆಂಬಾತನನ್ನು ನಾನು ಬಲ್ಲೆ. ಆತನಾರೆಂಬುದನ್ನೂ ನಾನೀಗ ತಿಳಿದೆ.

ಏನ ಹೇಳುವೆನಾದಿಯಲಿ ಸು
ಜ್ಞಾನಿ ನಿರಹಂಕಾರರೆಂಬರ
ನೂನತಪವನು ಮಾಡಲೆನ್ನ ನಿಜಸ್ವರೂಪವರ
ಸೂನುವೆಂಬಂದದಲಿ ಸುಳಿದನು
ತಾನೆಯಲ್ಲಮನೆಂಬ ಪೆಸರೊಳು
ಮಾನಿನಿಯೆ ಕೇಳಾ ಮಹಾತ್ಮನೊಳಱುವುದಱುವುಗಳ ೨೬

ಅಲ್ಲಮ ಪ್ರಭುವೆನಿಪನಾತನ
ಬಲ್ಲೆ ನಾನೀಗಱಿದೆ ಬಳಿಕಿ
ನ್ನಲ್ಲಿ ನಿಜತತ್ವಸ್ವರೂಪವನಱುವುದಱುವೊಡೇನರಿದು
ಒಳ್ಳಿತಾಯಿತು ತಿಳಿಯಬೇಕೆಂ
ಬೆಲ್ಲರಿಗೆ ಕರಸುಲಭವೆನುತಲಿ
ಭುಲ್ಲವಿಸಿ ಗಿರಿಜಾತೆ ನುಡಿಯಲು ಶಂಭುವಿಂತೆಂದ ೨೭

ಆಗ ಪಾರ್ವತಿ ಅಲ್ಲಮನನ್ನು ತಾನು ವಶಪಡಿಸಿಕೊಂಡು ನಿಜ ತತ್ವವನ್ನು ತಿಳಿಯುವುದಾಗಿ ಶಪಥಮಾಡಿ, ತನ್ನ ತಾಮಸಗುಣದ ಮೂರ್ತಿಯಾದ ಮಾಯೆಯನ್ನು ಅ ಕೆಲಸಕ್ಕೆ ನಿಯಮಿಸಿದಳು. ಬೆಳುವಲ ನಾಡಿನ ರಾಜಧಾನಿಯಾದ 'ಬನವಸೆ'ಯಲ್ಲಿ ಮಮಕಾರ ನೃಪನಿಗೂ ಪಟ್ಟದ ರಾಣಿಯಾದ ಮೋಹಿನೀದೇವಿಗೂ ಮಾಯೆ ಮಗಳಾಗಿ ಜನಿಸಿದಳು.

ಮಾಯೆ ಹುಟ್ಟಿದುದು :

ಬನವಸೆಯ ಮಮಕಾರ ಭೂಪಾಲ, ಮೋಹಿನಿದೇವಿಯರಿಗೆ ಮಾಯೆ ಜನಿಸುವಳು. ಆಗ ಯೋಗೀಶ್ವರರಂಥವರ ಚಿತ್ತವೂ ಚಂಚಲವಾಗುವುದು. ಅವಳ ಬಾಲ್ಯದ ಸೊಬಗನ್ನು ಚಿತ್ರಿಸಿದ ಚಾಮರಸನು, ಅವಳ ಪ್ರಾಯವನ್ನೂ ಬಣ್ಣಿಸಿ, ರಾಜಗುರುವಾದ ಅಹಂಕಾರಾಚಾರ್ಯರು ಆಕೆಗೆ ಶಿವನೆ ಪತಿಯಾಗುವನೆಂದು ತಿಳಿಸುವ ಸಂಗತಿಯು ಇಲ್ಲಿಯೇ ಪ್ರಸ್ತಾಪಿತವಾಗಿರುವುದು. ಮಮಕಾರ, ಮೋಹಿನಿ, ಮಾಯೆ ಮತ್ತು ಅಹಂಕಾರಾಚಾರ್ಯ ಈ ಹೆಸರುಗಳು ಕೇವಲ

ಹೆಸರುಗಳಲ್ಲ, ಅರ್ಥಪೂರ್ಣವಾದ ಸಂಕೇತಗಳು.

ಮಾಯಾದೇವಿಯು ಭೂವಲಯದಲ್ಲಿ ಜನಿಸಿ ತನಗೆ ಒಪ್ಪುವ ಹಾಗೆ ಹಾವಭಾವ ವಿಭ್ರಮಗಳಿಂದ ಅತಿಶಯವಾಗಿ ಕಂಗೊಳಿಸಿ ಬೆಳೆಯುತ್ತಿದ್ದಳು. ಬನವಾಸೆಯ ದೀರ್ಘವಾದ ವಿವರಣೆಯೊಂದಿಗೆ ಕಾವ್ಯವು ಮುಂದುವರಿಯುತ್ತದೆ. ಮಾಯೆಯು ಹುಟ್ಟುತ್ತಾಳೆ.

ಭಾವಿಸಲು ಮಮಕಾರ–ಮೋಹಿನಿ
ದೇವಿಯರ ಬಸುಱನಲಿ ವರರಾ
ಜೀವಲೋಚನೆ ರಚಿತರಂಜನೆ ಸಕಲಸಂಪನ್ನೆ
ದೇವ ದಾನವ ಮಾನವರುಗಳ
ದಾವಣಿಯ ದನವಾಗೆ ಕಟ್ಟುವ
ಭಾವೆ ಮಾಯಾದೇವಿ ಹುಟ್ಟಿದಳಖಿಳವಿಭವದಲಿ ೨೮

ಮಾಯಾದೇವಿ ದಿನ ದಿನಕ್ಕೆ ಪ್ರವರ್ಧಮಾನಳಾಗಿ, ಸಕಲ ಕಲಾ ಸಂಪನ್ನೆಯಾಗಿ ರೂಪಯೌವನ ಶೋಭಾ ಭೂಷಿತಳಾಗಿ ಬೆಳಗುತ್ತಿರಲು, ಆಕೆಗೆ ತಕ್ಕ ಪತಿ ಯಾರೆಂದು ಮಮಕಾರನು ಆಲೋಚಿಸುತ್ತಿದ್ದನು. ಆಗ ಕುಲಗುರುವಾದ ಅಹಂಕಾರಾಚಾರ್ಯನು ಬಂದು ಆಕೆಗೆ ಪರಶಿವನೇ ಪತಿಯಲ್ಲದೆ ಮಾನವರಾರೂ ಅಲ್ಲ ಎಂದು ತಿಳಿಸುವನು; ಅನಂತರ ಈಶ್ವರನನ್ನು ಒಲಿಸಿಕೊಳ್ಳುವ ಮಂತ್ರೋಪದೇಶವನ್ನು ಮಾಯಾದೇವಿಗೆ ಮಾಡಿ ಹೊರಟು ಹೋಗುವನು. ಮಾಯೆ ಬನವಸೆಯ ಮಧುಕೇಶ್ವರಾಲಯಕ್ಕೆ ಹೋಗಿ ನಿತ್ಯವೂ ಪೂಜೆ ಮಾಡುತ್ತಿರುವಳು. ಪರಮಸಿದ್ಧಿಯನ್ನು ಅನುಗ್ರಹಿಸುವ ಮಧುಕೇಶ್ವರನನ್ನು ಗಂಡನಿಗಾಗಿ ಬೇಡಿ ಭಕ್ತಿಯಿಂದ ಪೂಜಿಸುತ್ತಿದ್ದಳು. ಮಾಯಾದೇವಿಯು ಪತಿಯನ್ನು ಪಡೆಯುವ ಮನದ ಆಸೆಯಿಂದ ಮಧುಕೇಶ್ವರನು ತೃಪ್ತಿ ಪಡುವಂತೆ ಅಷ್ಟವಿಧಾರ್ಚನೆ ಹಾಗೂ ಷೋಡಶೋಪಚಾರಗಳಿಂದ ಕ್ರಮವಾಗಿ ಮನಃಪೂರ್ವಕವಾಗಿ ಪೂಜಿಸಿದಳು.

ಅಷ್ಟವಿಧದರ್ಚನೆಗಳಿಂದುಭ
ಯಾಷ್ಟವಿಧದುಪಚಾರದಿಂದಲ
ಭೀಷ್ಟವೆನಿಸುವ ನಿಜಮನೋವಲ್ಲಭನ ಬಯಕೆಯಲಿ
ಶ್ರೇಷ್ಠವೆನಿಸುವ ಮಧುಕನಾಥನ
ತುಷ್ಟಿವಡುವಂತರ್ಚಿಸಿದಳೀ
ಸೃಷ್ಟಿಯೊಳು ಸಾಂಗದಲಿ ಮಾಯಾದೇವಿ ಮನವೊಲಿದು ೨೯

ಋಷಿಮುನಿಗಳು ಏನುಕಾರಣ ಮಾಯೆಯ ಹುಟ್ಟಿಗೆ ಎಂಬುದನ್ನು ದುರ್ವಾಸ ಮುನಿಗಳಲ್ಲಿ ಕೇಳಿ ತಿಳಿದು ಕೊಳ್ಳುತ್ತಾರೆ. ಈ ಭಾಗದಲ್ಲಿ ಮಾಯೆಯ ಜನ್ಮದ ತರುವಾಯ ಉಂಟಾದ ಅಲ್ಲೋಲ ಕಲ್ಲೋಲದ ವಿವರಣೆ ಕಾವ್ಯದಲ್ಲಿ ಸುದೀರ್ಘವಾಗಿ ಅನಾವರಣಗೊಂಡಿದೆ.

## ಮಾಯೆ ಮಧುಕೇಶ್ವರನನ್ನು ಪೂಜಿಸಿದುದು :

ಮಾಯೆಯ ತುಂಬಿದ ಪ್ರಾಯದ ಸೌಂದರ್ಯವನ್ನು ರಸವತ್ತಾಗಿ ವರ್ಣಿಸಿದ ಚಾಮರಸನು, ಅವಳು ಮಧುಕನಾಥನನ್ನು ಪೂಜಿಸಿದ ಸಂದರ್ಭವನ್ನೂ ಶೃಂಗಾರಕ್ಕಾಗಿಯೇ ಬಳಸಿಕೊಂಡಿರುವನು. ಮಾಯೆ ಪ್ರಾಣಕಾಂತನನ್ನು ಬಯಸಿ ಮನಸ್ಸಿನಲ್ಲಿ ವಿಶೇಷವಾಗಿ ವೈಭವದಿಂದ ಮಧುಕೇಶ್ವರನ ಪಾದಕಮಲವನ್ನು ಪೂಜೆ ಮಾಡಿದಳು. ಮಾಯೆಯು ತನ್ನ ನೃತ್ಯಲೀಲೆಯಲ್ಲಿ ರತಿಯ ನೀತಿಯನ್ನು, ದೇವೇಂದ್ರನ ಹೆಂಡತಿಯ ಪಥವನ್ನು, ಬ್ರಹ್ಮನ ರಾಣಿ ಭಾರತಿಯ ಭಾವವನ್ನು, ನಾರಾಯಣನ ಪತ್ನಿ ಲಕ್ಷ್ಮಿಯ ನಟನೆಯನ್ನು ಅತಿಶಯದಿಂದ ತೋರಿಸಿದಳು.

ರತಿಯ ನೀತಿಯ ದಿವಿಜರಾಜನ
ಸತಿಯ ಸರಣಿಯ ಕಮಲಜನ ಭಾ
ರತಿಯ ಭಾವವನಾದಿನಾರಾಣಿಯ ನಟಣೆಯನು
ಅತಿಶಯದ ಪಾರ್ವತಿಯ ಪಾವನ
ಗತಿಯನೆಲ್ಲವ ತೋಱುತಿರ್ದಳು
ಚತುರೆ ಮಾಯಾದೇವಿ ತನ್ನಯ ಲಾಸ್ಯಲೀಲೆಯಲಿ [೩೦]

## ಪ್ರಭು ಮದ್ದಳೆಯನ್ನು ಬಾರಿಸಿದುದು :

ಮೋಹಿನಿಯ ಬಯಕೆಯನ್ನು ಈಡೇರಿಸುವವನಂತೆ ಅಲ್ಲಮಪ್ರಭು ಮದ್ದಳೆಗಾರನಾಗಿ ನಟಿಸಿದುದು ಇಲ್ಲಿಯ ವಿಶೇಷ. ಶೃಂಗಾರವಿರುವಂತೆ ಅಲ್ಲಮಪ್ರಭುವಿನ ಬಯಲರೂಪಿನ ನಿಲುವೂ ಇಲ್ಲಿದೆ. ನಾಟಕೀಯವಾದ ನಿರೂಪಣೆಯಿಂದ ಈ ಭಾಗ ಆಕರ್ಷಕವೂ ಆಗಿದೆ. ಅಲ್ಲಮನನ್ನು ಮೋಹಿಸಿದ ಮಾಯೆ ಗೆಳತಿಯರ ಮೂಲಕ ಆತನನ್ನು ಪಡೆದುಕೊಳ್ಳಲು ಯತ್ನಿಸುವಳು, ಮದಮಾನಿ ಎಂಬವಳು ಈ ನಿಟ್ಟಿನಲ್ಲಿ ಪ್ರಯತ್ನ ಮಾಡುವ ಸಂದರ್ಭ ಹೀಗಿದೆ. ಹೀಗೆ ಮಾತಿಗೆ ಮಾತು ಬೆಳೆಯುವುದನ್ನು ನಿಲ್ಲಿಸಲು ಮದಮಾನಿಯು ನೇರವಾಗಿಯೇ ಮಾಯೆಯು ಅಲ್ಲಮನಿಗೆ ಸೋತಿರುವಳೆಂದು ತಿಳಿಸುವಳು. ನೀವೆ ಬಲ್ಲಿರಿ ನಿಮ್ಮ ಮಾಯಾದೇವಿಯ ಅಂತಸ್ಥವನು ಎಂದು ಹೇಳಿ ಮನಸು ಬಂದಂತೆ ನೀವೇ ಮಾಡುವುದು ಎಂದಾಗ ಮದಮಾನಿ ತನ್ನ ಪ್ರಯತ್ನದಲ್ಲಿ ಮುಂದುವರಿಯುವಳು. ಆದರೆ ಅಲ್ಲಮ ಮಾಯೆಯ ಕೈಗೆ ನಿಲುಕನು. ಬಯಲಿಗನಾಗಿರುವ ಅಲ್ಲಮಪ್ರಭು ಮಾಯೆಯ ಕೈಗೆ ಸಿಕ್ಕದಿದ್ದಾಗ ಅವಳು ವಿಹ್ವಲಗೊಳ್ಳುವಳು. ಆಕೆಯ ಗೆಳತಿಯರು ಅವಳಿಗೆ ತಿಳಿಹೇಳುವುದರ ಜೊತೆಗೆ, ಅಲ್ಲಮನಿಗೆ ಆಕೆಯ ಸ್ಥಿತಿಯನ್ನೂ ತಿಳಿಸುವರು.

ಮಾಯೆಯು ಮಧುಕೇಶ್ವರನನ್ನು ಬಯಸಿ ವ್ಯರ್ಥವಾದ ಭಕ್ತಿಯನ್ನು ಆಚರಿಸಲು ಮನುಷ್ಯವೇಷದ ಅಲ್ಲಮಪ್ರಭುವು ಸಂಶಯವನ್ನುಂಟು ಮಾಡುವ ಸಂಗವನ್ನು ಅವಳಲ್ಲಿ ನಟಿಸಿದನು. ಹೀಗೆ ಮಾಯೆ ಮಧುಕೇಶ್ವರನನ್ನು ಪೂಜಿಸುತ್ತಿರಲು ಅಲ್ಲಮಪ್ರಭು "ಸ್ವರೂಪಸನಾಮವನು ಮಱೆಮಾಡಿ" ಹದಿನಾರು ಹದಿನೆಂಟು ವರ್ಷ ವಯಸ್ಸಿನ ವಿಟನ ರೂಪವನ್ನು ಧರಿಸಿ, "ಬೆನ್ನೊಳು ಮಱೆವ ಮದ್ದಳೆ ಸಹಿತ ಮಧುಕೇಶ್ವರಾಲಯದ ಮುಂದೆ ಸುಳಿದನು. ಹೊರಗಡೆ ನಿಂತು ಎಲ್ಲರಿಗೂ ಆಶ್ಚರ್ಯವುಂಟಾಗುವಂತೆ ಮದ್ದಳೆಯನ್ನು ಬಾರಿಸುತ್ತಿರಲು ನಾಟ್ಯಸೇವಾಸಕ್ತಳಾಗಿ ರಂಗಮಂಟಪದಲ್ಲಿದ್ದ ಮಾಯಾದೇವಿ ಕಾರಮುಗಿಲಿನ ಗರ್ಜನೆಯ ಕಿವಿಯಾರೆ ಕೇಳಿದ ಸೋಗೆಯಂತಿರೆ ಹಾರವಿಸುತ" ಆ ಅಲ್ಲಮನನ್ನು ಒಳಕ್ಕೆ

ಕರೆಯಿಸಿದಳು.

ಆವ ದೇಶದ ಪುರಷನೈ ನಿನ
ಗಾವ ಹೆಸರೈ ನೀನು ನೆಲೆಗೊಂ
ಡಾವ ಠಾವಿನಲಿಪ್ಪೆಯೈಯೆಂದೆನುತ ವಿನಯದಲಿ
ಭಾವೆಯರು ಬಳಿಕಾತನನು ಸಂ
ಭಾವಿಸುತೆ ಕೇಳಿದೊಡೆಯಲ್ಲಮ
ದೇವನೊಲಿದಾ ಸತಿಯರಿಗೆ ನಸುನಗುತಲಿಂತೆಂದ [೩೧]

ಬಯಲ ಚಪ್ಪರಿಪಂತೆ ಚುಂಬನ
ಬಯಲನಪ್ಪುವವೊಲು ಸಮಷ್ಟಿಕೆ
ಬಯಲನೀಕ್ಷಿಸುವಂತೆ ನೋಟದ ಕೂಟದನುಭವಣೆ
ಬಯಲುಗೊಂಡವು ಭಾವಿಸಲು ನಿ
ರ್ವಯಲಿನಲ್ಲಮಗೋತ ಕಾರಣ
ಬಯಲ ಬಿಪ್ಪದ ಬಲೆಗೆ ಬಿದ್ದಳು ಮಾಯೆ ಸುರತದಲಿ [೩೨]

ಆಗ ಮಾಯೆಯ ಕೆಳದಿಯರು ಆತನನ್ನು ಮುತ್ತಿಕೊಂಡು "ಲೇಸು ಮಾಡಿದೆನಯ್ಯ, ಮಾಯೆಯನೀಸುದಿನ ಮನವೊಲಿಸಿ ಕಡೆಯಲಿ ಘಾಸಿ ಮಾಡುವುದುಚಿತವೇ ನಿನಗೆ?" ಎಂದು ಕೇಳಿದರು. ಆಗ ಅಲ್ಲಮನು "ಆರು ಮೊದಲಲಿ ಬಯಸ ಹೇಳಿದರು? ಆರು ಕಾಣುತ ಕರೆಸ ಹೇಳಿದರು? ಆರು ತನ್ನನು ಬಳಿಕ ಉದಾಸೀನ ಮಾಡಹೇಳಿದರು? ನಾರಿಯರಿಗಿದು ಸಹಜ ಸಂಚಲ ಕಾರಣಿಕತನ; ತನ್ನ ತಾನೇ ದೂರಿಸಿದಡಾನೇನ ಮಾಡುವೆ?" ಎಂದು ಉತ್ತರಕೊಟ್ಟನು.

## ವಿಮಲೆ ಬಂದಳು :

ಪಾರ್ವತಿಯು ತನ್ನ ಕಳೆಯಾದ ಮಾಯೆ ಭೂಮಿಗೆ ಹೋಗಿ ಬಹಳ ದಿನಗಳಾದವೆಂದು ತಿಳಿದು ಅವಳನ್ನೂ ಕರೆತರಲು ವಿಮಳೆಯನ್ನು ಕಳಿಸುವಳು. ವಿಮಳೆ ಇಲ್ಲಿಗೆ ಬಂದು ಅಲ್ಲಮಪ್ರಭುವಿನ ಜೀವನ ವೃತ್ತಾಂತವನ್ನು ಮಾಯೆಗೆ ವಿವರವಾಗಿ ತಿಳಿಸುವಳು. ಇಲ್ಲಿ ಹಿನ್ನೋಟದ ತಂತ್ರವನ್ನು ಚಾಮರಸನು ಬಳಸಿರುವನು. ಅಲ್ಲಮನ ವ್ಯಕ್ತಿತ್ವವನ್ನು ಚಾಮರಸನು ತನ್ಮಯತೆಯಿಂದ ಚಿತ್ರಿಸಿರುವನು. ಮಾಯೆಯಿದ್ದಲ್ಲಿಗೆ ವಿಮಳೆ ಬಂದಾಗ, ಮಾಯೆಯು ಅವಳ ಬರುವಿಕೆಯ ಕಾರಣವನ್ನು ವಿಚಾರಿಸುವಳು. ಉಮೆಯ ಆಜ್ಞೆಯಂತೆ ಭುವಿಗೆ ಬಂದ ವಿಮಳೆ ಅಲ್ಲಮನ ರೀತಿಯನ್ನು ವಿಸ್ತರಿಸಿ ಹೇಳಲು ಮಾಯೆ ಮನವೊಲಿದು ಕೇಳುತ್ತಿದ್ದಳು. ಅವರ ಇಚ್ಛೆಯೊಂದಿಗೆ ಕೆಲವು ಗಳಿಗೆಗಳಲ್ಲೇ ನುಡಿಯಲು ಕಲಿತನು; ಕೆಲವು ಗಳಿಗೆಗಳಲ್ಲೇ ನಡೆಯಲು ಕಲಿತನು; ಕೆಲವು ಗಳಿಗೆಗಳಲ್ಲೇ ಬೆಳೆದನು; ಕೆಲವು ಗಳಿಗೆಗಳಲ್ಲೇ ಬಾಲಲೀಲೆಯನ್ನು ಹೊಂದಿಸಿಕೊಂಡು ಜೊತೆಯಲ್ಲಿ ಆಡುವ ಮಕ್ಕಳ ನಡುವೆ ತನ್ನ ಲೀಲೆಗಳಿಂದ ಶೋಭಿಸುತ್ತಲಿದ್ದನು.

ಗಳಿಗೆ ಸಂಖ್ಯೆಗೆ ನುಡಿಯ ಕಲಿತನು
ಗಳಿಗೆ ಸಂಖ್ಯೆಗೆ ನಡೆಯ ಕಲಿತನು

---

ಗಳಿಗೆ ಸಂಖ್ಯೆಗೆ ಬೆಳೆದನವರ ಮನೋರಥದ ಕೊಡೆ
ಗಳಿಗೆ ಸಂಖ್ಯೆಗೆ ಬಾಲಲೀಲೆಯ
ನಳವಡಿಸಿ ಕೊಂಡಾಡುತಿಹ ಮ
ಕ್ಕಳಲಿ ಮೆಱೆವುತಲಿರ್ದನಲ್ಲಮ ತನ್ನ ಲೀಲೆಯಲಿ [೩೩]

ಪ್ರಭು ಮಾಯೆಗೆ ಸಿಕ್ಕದೆ ಹೋದುದು :

ಅಲ್ಲಮನ ವ್ಯಕ್ತಿತ್ವವನ್ನು ತಿಳಿಸಿ, ಆತನನ್ನು ಪಡೆಯಲು ಮಾಡಬೇಕಾದ ಶಿವಸದಾಚಾರವನ್ನು ಕುರಿತು ವಿಮಳೆಯು ಮಾಯೆಗೆ ಉಪದೇಶಿಸುವಳು. ವಿಮಳೆಯ ಉಪದೇಶಕ್ಕೆ ಉತ್ತರಿಸಿದ ಮಾಯೆ ಮಧುಕೇಶ್ವರ ದೇವಾಲಯಕ್ಕೆ ಹೋಗಿ, ಅರ್ಚಿಸಿ, ನೃತ್ಯರಂಗದಲ್ಲಿ ಬಂದು ನಿಂತುಬಿಡುವಳು. ಮಾಯೆಯ ನೃತ್ಯ ನಡೆದಂತೆ, ಅಲ್ಲಮಪ್ರಭು ಮದ್ದಳೆಗಾರನಾಗಿ 'ಅಹದಲ್ಲವೆಂಬೀ ನಟನೆ' ಮಾಡಿದ್ದು ಮನೋಜ್ಞವಾಗಿದೆ. ಹಾಗೆಯೇ ಮದ್ದಳೆಯನ್ನು ಒಡೆದು ಹಾಕಿ ಆತನು ಹೋದುದೂ ಇಲ್ಲಿ ಗಮನಿಸುವಂತಹದಾಗಿದೆ. ಮದ್ದಳೆ ಒಡೆದು ಅಲ್ಲಮಪ್ರಭು ಅಲ್ಲಿಂದ ಹೊರಬಿದ್ದರೂ ಮಾಯೆ ಎಲ್ಲಾ ಕಷ್ಟಗಳನ್ನು ಲಕ್ಷಿಸದೆ ಆತನ ಬೆನ್ನಟ್ಟುವಳು. ಪರಸ್ಪರ ವಾದವೂ ನಡೆಯುವುದು. ವಿಮಳೆ ಮಧ್ಯಸ್ಥಿಕೆ ವಹಿಸುವಳು. ತಾಮಸದಿಂದ, ಚಂಚಲ ಭಕ್ತಿಯಿಂದ ಪ್ರಯೋಜನವಿಲ್ಲವೆಂಬುದು ಪ್ರಭುವಿನ ಸ್ಪಷ್ಟ ಅಭಿಪ್ರಾಯವಾಗಿದ್ದು, ಬಂದ ದಾರಿಯಿಂದ ಮರಳಬೇಕೆಂದು ಮಾಯೆಗೂ ತಿಳಿಸುವನು.

"ಕಾಮವೆತ್ತಲು ಪರತತ್ವದ, ಸೀಮೆಯೆತ್ತಲು ತಿಮಿರವೆತ್ತಲು"

ವಿಮಲೆ ಮಾಯೆಗೆ ಎಲ್ಲವನ್ನು ವಿಸ್ತರಿಸಿ ಹೇಳಲು ಆ ಕಾರ್ರ್ಯವ್ಯವಸ್ಥೆಯನ್ನು ಕೇಳಿದ ಮಾಯೆ ತಾನು ಅಲ್ಲಮನನ್ನು ತಿಳಿದುರುವುದಾಗಿ ಹೇಳಿದಳು.

ಅಲ್ಲಮನು ತಾನೆಂಬ ಹೆಸರವ
ನಲ್ಲಮಪ್ರಭುವಾಗಲಾಪನು
ಭುಲ್ಲವಣೆಯಲಿ ನಿನ್ನ ಜವ್ವನ ಕೊಬ್ಬಿನಲಿ ಮಱೆದು
ಪಲ್ಲವಿಸಿ ನೀ ಕಾಮಿಸಿರ್ದೊಡೆ
ಖುಲ್ಲತನದಲಿ ವಿಕೃತವೇಷದ
ಅಲ್ಲಮನೆ ತಾ ಬಂದನೈಸಲೆ ಎಂದಳಾ ವಿಮಳೆ [೩೪]

ಎಂದೊಡಾನೇನಱಿಯೆನಕಟಾ
ಮಂದಮತಿಯೇ ಅಲ್ಲಮಪ್ರಭು
ವೆಂದೆನಿಸಿಕೊಂಬುವನು ತಾ ಪ್ರತ್ಯಕ್ಷ ಪರಬೊಮ್ಮ
ಎಂದು ಹೇಳುವರೆಲ್ಲರಿವನೇ
ಸಂದ ಮದ್ದಳೆಯಲ್ಲಮನು ಬಿಡು
ಹೊಂದದೌ ನೀ ಹೇಳುವುದು ಹುಸಿಯೆಂದಳಾ ಮಾಯೆ [೩೫]

---

ಅಲ್ಲಮನೆಂಬ ಹೆಸರಿನವನು ಅಲ್ಲಮಪ್ರಭುವಾಗಿರುವನು. ಹೆಚ್ಚುಗಾರಿಕೆಯ ನಿನ್ನ ಯೌವನದ ಕೊಬ್ಬಿನಲ್ಲಿ ಮೈಮರೆತು ಮುಂದುವರಿದು ನೀಚತನದಲ್ಲಿ ನೀನು ಕಾಮಿಸಿರಲು ವಿಕೃತವೇಷದಲ್ಲಿ ಅಲ್ಲಮನು ತಾನೇ ಬಂದಿರುವನಷ್ಟೆ ಎಂದು ಮಾಯೆಗೆ ವಿಮಳೆ ತಿಳಿಹೇಳಿದಳು.

ಕಂಗಳಲಿ ಮಾತುಗಳು ತಿಳಿವೊಡೆ
ಕಂಗಳಲಿ ಮಾಟಗಳು ಬಗೆವೊಡೆ
ಕಂಗಳಲಿ ಸಮ್ಮೋಹಗಳು ಕಂಗಳಲಿ ನೇಹಗಳು
ಕಂಗಳಲಿ ಸರ್ವಪ್ರಪಂಚುಗ
ಳಂಗನೆಯರಿಗೆ ಸಹಜವೆಂದೆನೆ
ಕಂಗಳಿಂದಾ ವಿಮಳೆ ಸೂಚಿಸಲರಿಽದಳಾ ಮಾಯೆ [೩೬]

ತಿಳಿವುದಾದರೆ ಕಣ್ಣುಗಳಿಂದಲೇ ಮಾತುಗಳು; ಯೋಚಿಸುವುದಾದರೆ ಕಣ್ಣುಗಳಿಂದಲೇ ಕಾರ್ಯಗಳು; ಕಣ್ಣುಗಳಿಂದಲೇ ಸಮ್ಮೋಹಗಳು; ಕಣ್ಣುಗಳಿಂದಲೇ ಸ್ನೇಹಗಳು; ಕಣ್ಣುಗಳಲ್ಲಿ ಸರ್ವಪ್ರಪಂಚಗಳು ಸಹಜವೆನ್ನುವಂತೆ ವಿಮಳೆ ಕಣ್ಣುಗಳಿಂದ ಸೂಚಿಸಲು ಮಾಯೆ ಅರ್ಥಮಾಡಿಕೊಂಡಳು.

ಕಾಮವೆತ್ತಲು ಪರಮತತ್ವದ
ಸೀಮೆಯೆತ್ತಲು ತಿಮಿರವೆತ್ತಲು
ತಾಮರಸಸಖನೆತ್ತಲರಿಸಿನವೆತ್ತ ಬಿಸಿಲೆತ್ತ
ಭ್ರಾಮಕದ ನುಡಿ ಸಾಕು ನೀನೆ
ತ್ತಾ ಮಹಾಘನವೆತ್ತ ಮರುಳೇ
ಕ್ಷೇಮದಲಿ ನೀ ಬಂದ ಬಟ್ಟೆಯಲಬಲೆ ಹೋಗೆಂದ [೩೭]

“ಕಾಮವೆಲ್ಲಿ ಪರಮತತ್ವದ ಎಲ್ಲೆಯೆಲ್ಲಿ? ಕತ್ತಲೆಯೆಲ್ಲಿ ಸೂರ್ಯನೆಲ್ಲಿ? ಅರಿಸಿನವೆಲ್ಲಿ ಬಿಸಿಲೆಲ್ಲಿ? ಇನ್ನು ಅಸಂಬದ್ಧವಾದ ಮಾತು ಸಾಕು. ನೀನೆಲ್ಲಿ ಆ ಮಹಾಘನವೆಲ್ಲಿ? ಹುಚ್ಚಿ, ಕ್ಷೇಮದಿಂದ ನೀನು ಬಂದ ದಾರಿಯಲ್ಲಿ ಹೋಗು” ಎಂದು ಅಲ್ಲಮನು ನುಡಿದನು.

ಬಯಲ ಬಂಧಿಸಲೆಂದು ಕೃತನಿ
ಶಯವ ಮಾಡಲು ಸಿಕ್ಕಬಲ್ಲುದೆ
ನಿಯತವೆನ್ನನು ಹಿಡಿದುಕೊಂಬೊಡೆ ನೋಡು ನೀನೆನುತ
ಪ್ರಿಯದಲಾಗಳೆ ತನ್ನ ನಿಜ ನಿ
ರ್ಣಯವ ನಿರ್ಮಿಸಿ ನಿಮಿಷದಲಿ ನಿ
ರ್ವಯಲ ಜಾಲವ ಬೀಸಿ ಹೋದನು ಮಾಯೆಗಲ್ಲಮನು [೩೮]

ಬಯಲನ್ನು ಬಂಧಿಸಬೇಕೆಂದು ದೃಢನಿರ್ಧಾರ ಮಾಡಲು ಅದು ಸಿಗಬಲ್ಲುದೆ? ನಿಶ್ಚಿತವಾಗಿಯೂ ನನ್ನನ್ನು ಹಿಡಿದುಕೊಳ್ಳುವೆಯಾದರೆ ನೀನು ಪ್ರಯತ್ನಿಸಿ ನೋಡು ಎಂದು

ಪ್ರೀತಿಯಿಂದ ತನ್ನ ದೃಢನಿರ್ಧಾರ ಮಾಡಿ ಮರು ನಿಮಿಷದಲ್ಲಿ ಮಾಯೆಗೆ ನಿರ್ವಯಲ ಬಲೆಯನ್ನು ಬೀಸಿ ಅಲ್ಲಮ ಅಲ್ಲಿಂದ ನಿರ್ಗಮಿಸಿದನು.

## ಬಸವಾದಿ ಪ್ರಮಥರು ಧರೆಗಿಳಿದುದು :

ಮಾಯೆಯು ಅಲ್ಲಮನಿಂದ ಸೋಲನ್ನನುಭವಿಸಿ ಬಂದಾಗ ಗಿರಿಜೆ ಚಿಂತಿತಳಾಗುವಳು. ಆಗ ಶಶಿಮೌಳಿಯು ಆಕೆಯ ಚಿಂತೆಯನ್ನು ಹೋಗಲಾಡಿಸಲು ಉಪಾಯವನ್ನು ಸೂಚಿಸುವನು. ಅಲ್ಲಮಪ್ರಭುವನ್ನು ಪ್ರಸನ್ನಗೊಳಿಸಲು ಸಾತ್ವಿಕದ ಸಂಪನ್ನ ಕಳೆಯನ್ನು ಕಳುಹಿಸಬೇಕೆಂಬುದು ಆತನ ಸಲಹೆ. ಈ ಸಂದರ್ಭದಲ್ಲಿ ವೃಷಭೇಂದ್ರನು ಶಿವನ ಕರುಣೆಯನ್ನು ಕುರಿತು ಮಾತಾಡಲು ಸಂತೋಷಗೊಂಡ ಶಿವನು ಅಲ್ಲಮನ ಸಮ್ಮೇಳದಲ್ಲಿ ಸುಖಿಯಾಗು ಹೋಗು ಎಂದು ಆತನಿಗೆ ತಿಳಿಸುವನು. ವೃಷಭೇಂದ್ರನ ಜೊತೆಗೆ ಏಳನೂರೆಪ್ಪತ್ತು ಪ್ರಮಥ ಗಣರೂ ಈ ಲೋಕಕ್ಕೆ ಜನಿಸಿ ಬರುವರು. ಶಿವನು ಪ್ರೀತಿಯಿಂದ ಗಿರಿಜೆಯ ಸಾತ್ವಿಕ ಕಳೆಯಾದ ಮಹಾದೇವಿಯಕ್ಕನನ್ನು ಶ್ರೇಷ್ಠರಾದ ಬಸವಾದಿ ಪ್ರಮಥಗಣಗಳನ್ನು ಅಲ್ಲಮ ಪ್ರಭುವನ್ನು ತಿಳಿಯಲಿಕ್ಕಾಗಿ ಭೂಮಿಗೆ ಕಳುಹಿಸಿದನು.

ವಿಮಳೆ ಸಹಿತವೆ ಹೋಗಿ ತನಗ
ಲ್ಲಮನು ಸಿಕ್ಕದೆ ಹೋದ ಕಾರ್ಯ
ಕ್ರಮವನಾಗಳೆ ಮಾಯೆ ಹೇಳಿದಳತ್ತ ವಿಸ್ತರಿಸಿ
ಉಮೆಯದೆಲ್ಲವ ಕೇಳಿ ಚಿಂತಾ
ಭ್ರಮೆಯಲಿರುತಿರಲಱಿದು ಬಂದಾ
ರಮಣಿಯನು ಸಂತೈಸಿ ನುಡಿದನು ನಗುತೆ ಶಶಿ ಮೌಳಿ ೩೯

ಮಾಯೆಯು ವಿಮಳೆಯೊಂದಿಗೆ ಕೈಲಾಸಕ್ಕೆ ಹೋಗಿ ಅಲ್ಲಮನು ತನಗೆ ಸಿಕ್ಕದೆ ಹೋದದ್ದನ್ನು ಗಿರಿಜೆಗೆ ವಿಸ್ತರಿಸಿ ಹೇಳಿದಳು. ಉಮೆ ಅದೆಲ್ಲವನ್ನು ಕೇಳಿ ಚಿಂತೆಯಿಂದ ಮಂಕಾಗಿರಲು, ಅದನ್ನರಿತ ಚಂದ್ರ ಮೌಳಿಯು ಗಿರಿಜೆಯಲ್ಲಿಗೆ ಬಂದು ನಗುತ್ತ ಅವಳನ್ನು ಸಂತೈಸುತ್ತಾ ಹೀಗೆಂದನು

ನಿನ್ನ ನಿರ್ಮಳ ಸಾತ್ವಿಕದ ಸಂ
ಪನ್ನ ಕಳೆಯನು ಕಳುಹಿ ಧರೆಯೊಳು
ಚೆನ್ನೆಯಾಗಿರೆ ಜನಿಸಿ ನೆಱೆ ನಿಷ್ಕಾಮಭಕ್ತಿಯಲಿ
ಮುನ್ನಲಿರುತಿರಲಲ್ಲಮಪ್ರಭು
ತನ್ನ ತಾನೇ ನಿಜವ ತೋಱುವ
ನಿನ್ನು ಸಂಶಯವಿಲ್ಲ ದಿಟವಿದು ಗಿರಿಜೆ ಕೇಳೆಂದ ೪೦

ಎನೆ ಹಸಾದ ಸಲಿಸಿ ಬದುಕಿದೆ
ನೆನುತೆ ಬಂಜೆಗೆ ಬೇಹ ಬಯಕೆಯ
ತನುಜನಾದಂತಾಕೆಯಾ ನುಡಿಗೇಳಿ ಪರಿಣಮಿಸಿ
ಮನದೊಳುತ್ಸಾಹಿಸುತೆ ತನ್ನಯ

ವಿನುತ ಸತ್ವಗುಣಸ್ವರೂಪವ
ನನುವಿನಲಿ ಸಂಜನಿಸ ಕಳುಹಿದಳುಮೆ ಧರಾತಳಕೆ [೪೧]

ಶಿವನು ಹಾಗೆಂದು ನುಡಿಯಲು ಗಿರಿಜೆಯು 'ಅನುಗ್ರಹ ಮಾಡಿದುದರಿಂದ ಬದುಕಿದೆನು' ಎನ್ನುತ್ತ ಬಂಜೆಯಾದವಳಿಗೆ ಬಯಕೆಯ ಮಗನಾದಂತೆ ಶಿವನ ಆ ಮಾತನ್ನು ಕೇಳಿ ಅವಳು ತೃಪ್ತಿಗೊಂಡು ಮನಸ್ಸಿನಲ್ಲಿ ಸಂತೋಷಿಸುತ್ತಾ ತನ್ನ ಹೊಗಳಿಕೆಗೆ ಪಾತ್ರವಾದ ಸಾತ್ವಿಕ ಗುಣಸ್ವರೂಪವನ್ನು ಭೂತಳದಲ್ಲಿ ಹುಟ್ಟಲು ಕಳುಹಿಸಿದಳು.

### ಬಸವಾದಿ ಪ್ರಮಥರು ಜನಿಸಿದುದು :

ಭೂಲೋಕದಲ್ಲಿ ಮಹಾದೇವಿಯಕ್ಕ, ಬಸವಣ್ಣ, ಪ್ರಮಥ ಗಣ, ಎದುರು ವಾದಿಗಳು ಎಲ್ಲರೂ ಹುಟ್ಟಿ ಸಂತೋಷದಿಂದ ಬೆಳೆದರು.

ಇಳೆಯೊಳುಡುತಡಿಯೆಂಬ ಪಟ್ಟಣ
ದೊಳಗೆ ವೀರಶಿವಾಗಮಿಕ ನಿ
ರ್ಮಳನ ವಲ್ಲಭೆಯೆನಿಪ ಸುಮತಿಯ ಗರ್ಭಶುಕ್ತಿಯಲಿ
ಚೆಲುವೆಯಾದ ಕುಮಾರಿಯೆಂಬ
ಗ್ಗಳದ ಮುತ್ತುದಯಿಸಿತು ಧರಣೀ
ತಳದೊಳಗೆ ಪಾರ್ವತಿಯ ಸಾತ್ವಿಕಗುಣವೆ ರೂಪಾಗಿ [೪೨]

ಭೂಮಿಯಲ್ಲಿ ಉಡುತಡಿಯೆಂಬ ಪಟ್ಟಣದಲ್ಲಿ ವೀರಾಶಿವಾಗಮಿಕನಾದ ನಿರ್ಮಳನ ಹೆಂಡತಿಯೆನ್ನಿಸಿದ ಸುಮತಿಯ ಗರ್ಭಶಕ್ತಿಯಲ್ಲಿ ಪಾರ್ವತಿಯ ಸಾತ್ವಿಕಗುಣವೇ ರೂಪಾಗಿ ಚೆಲುವೆ ಕುಮಾರಿಯೆಂಬ ಶ್ರೇಷ್ಠ ಮುತ್ತಾಗಿ ಹುಟ್ಟಿತು. ಇದೇ ರೀತಿ ಬಸವಣ್ಣನವರು ಜನಿಸಿದ ಬಗ್ಗೆ ಕವಿ ಹೇಳಿದ್ದಾನೆ.

ನಂಬುಗೆಯ ಕೊಡುವಂತೆ ಹಸ್ತವ
ನಿಂಬಿನಲಿ ಮಸ್ತಕದೊಳಿರಿಸುತ
ಲುಂಬ ತಾಣವಿದೆಂದು ಕಿವಿಯಲಿ ಪಚ್ಚಿ ಪೇಳ್ವಂತೆ
ಶಂಭು ಪಂಚಾಕ್ಷರಿಯ ನೇಮಿಸಿ
ತುಂಬಿ ತನುವಿಗೆ ಬಸವ ನೀನೆಂ
ದೆಂಬ ನಾಮವನಿಟ್ಟು ಹೋದನು ದೇವ ನಿಮಿಷದಲಿ [೪೩]

ಆ ಮಹಾದೇವನು ಆಶ್ವಾಸನೆ ಕೊಡುವಂತೆ ಹಸ್ತವನ್ನು ಶಿರದಲ್ಲಿ ನೆಲೆಗೊಳಿಸುತ್ತಾ ಜ್ಞಾನವನ್ನು ಉಣ್ಣುವ ಸ್ಥಾನವಿದೆಂದು ಕಿವಿಯಲ್ಲಿ ಹೇಳುವಂತೆ ಶಿವಪಂಚಾಕ್ಷರೀ ಮಂತ್ರವನ್ನು ಉಪದೇಶಿಸಿ, ದೇಹದಲ್ಲಿ ತುಂಬಿ ಬಸವನೆಂಬ ಹೆಸರನಿಟ್ಟು ನಿಮಿಷದಲ್ಲಿ ಅಂತರ್ಧಾನನಾದನು.

### ಮಹಾದೇವಿಯಕ್ಕ :

ಮಹಾದೇವಿ ತುಂಬು ಪ್ರಾಯಕ್ಕೆ ಬಂದಾಗ ಪುರದರಸನ ಕಣ್ಣಿಗೆ ಬೀಳುವಳು. ಆಕೆಯನ್ನು ಪಡೆಯಲು ಅರಸನು ಹಾತೊರೆಯುವನು. ಅನಿವಾರ್ಯವಾದ ಪರಿಸ್ಥಿತಿ ನಿರ್ಮಾಣವಾದಾಗ

ಅರಮನೆಗೆ ತೆರಳಬೇಕಾಗುವುದು. ಹಾಗಿದ್ದರೂ ಅವಳು ತನ್ನ ನಿಷ್ಠೆಯನ್ನು ಕಾಯ್ದುಕೊಂಡು ಅರಮನೆಯಿಂದ ಹೊರಬೀಳುವಳು. ತನ್ನ ಇಷ್ಟದೈವತ್ವವನ್ನು ಹುಡುಕುತ್ತಾ ಸಾಗುವಳು. ತನಗೆ ಮನಸೋತಿದ್ದ ಕೌಶಿಕ ಮಹಾರಾಜರನ್ನು ಒಲ್ಲದೆ ವಿರಕ್ತಿಯನ್ನು ಅನುಕರಿಸಿ ಭಕ್ತಿಯನ್ನು ಗುರಿಯಾಗಿ ಹೊಂದಿ ಮಹಾದೇವಿಯಕ್ಕ ನಡೆದಳು.

## ಗೊಗ್ಗಯ್ಯ:

ಗೊಗ್ಗಯ್ಯನೆಂಬ ಬೇಸಾಯಗಾರನಿಗೆ ಅಲ್ಲಮಪ್ರಭು ಶಿವಭಕ್ತಿಯ ಮಹತ್ವವನ್ನು ತಿಳಿಸಿಕೊಡುವನು.ಅನಿಮಿಷವನ್ನು ತೋರಿಸುವ ಸನ್ನಿವೇಶವೂ ಈ ಮಧ್ಯೆ ಬರುತ್ತದೆ. ಅನಿಮಿಷಯ್ಯನ ಕೈಯಲ್ಲಿಯ ಶಿವಲಿಂಗವನ್ನು ನೋಡಿ, ಗೊಗ್ಗಯ್ಯನಿಗೆ ಬೆರಗು ಉಂಟಾಗುತ್ತದೆ.

ಇದೆ ಕಣಾ ಶಿವಲಿಂಗಭಕ್ತಿಯ
ಹೃದಯವನು ಸಾಧಿಸುವ ಪರಿಭಾ
ವದಲಿ ನೆಱೆ ನಟ್ಟಾಲಿಯಲಿ ನಿಬ್ಬೆಱಗಿನಂದದಲಿ
ಇದನು ಸಾಧಿಸಿದಧನ್ಯವ್ಯವಸಾ
ಯದಲಿ ಸಾವೊಡೆ ಕಬ್ಬಿನಿಚ್ಚೆಗೆ
ಬಿದಿರ ಮೆಲುವಂತಪ್ಪುದೈ ಗೊಗ್ಗಯ್ಯ ಕೇಳೆಂದ [೪೪]

ಅಲ್ಲಮಪ್ರಭುವಿನ ಈ ಮಾತಿನಿಂದ ಗೊಗ್ಗನಲ್ಲಿ ಪರಿವರ್ತನೆಯಾಗಿರುವುದು ಸಹಜವಾಗಿದೆ. ಅನಿಮಿಷದೇವನನ್ನು ತನ್ನಲ್ಲಿ ಐಕ್ಯಮಾಡಿಕೊಂಡು, ಪ್ರಭುವು ಲೀಲೆಯಿಂದ ಸುಳಿದನು.

ಲಿಂಗ ನಿಜವನು ಬಯಸಿ ಭಕ್ತಜ
ನಂಗಳಿರುತಿರಲಲ್ಲಮಪ್ರಭು
ಲಿಂಗನಂತದನಱಿದು ತನ್ನ ಕಟಾಕ್ಷಕಾಂತಿಯಲಿ
ಹಿಂಗಿಸುವೆನೆಲ್ಲರ ಮನೋಮಯ
ದಂಗದೊಳಹೊಱಗಿಡಿದ ತಮದ ತ
ರಂಗಗಳನೆಂದೆನುತೆ ಕಾರಣಕಾಯದಲಿ ಸುಳಿದ [೪೫]

ಪರಮಾತ್ಮನ ನಿಜಸ್ವರೂಪವನ್ನು ತಿಳಿಯಬಯಸಿ ಭಕ್ತಜನರು ಇರುತ್ತಿರಲು ಅದನ್ನರಿತ ಅಲ್ಲಮಪ್ರಭುಲಿಂಗನು ಎಲ್ಲ ಮನೋಮಯವಾಗಿರುವ, ದೇಹದ ಒಳಹೊರಗೆ ಕವಿದಿರುವ ಕತ್ತಲೆಯ ತರಂಗಗಳನ್ನು ತನ್ನ ಕಡೆಗಣ್ಣೋಟದ ಕಾಂತಿಯಿಂದ ಹಿಂಗಿಸುವೆನೆಂದು ಮಹದ್ ಉದ್ದೇಶವೊಂದರ ನೆರವೇರಿಕೆಗಾಗಿಯೇ ದೇಹ ಧರಿಸಿ ಕಾಣಿಸಿಕೊಂಡನು.

ಆವ ಬೇಸಾಯವನು ಮಾಡಲು
ಜೀವವೆತೆಗಳು ತಪ್ಪವದಱಲಿ
ದೇವನೊಲಿವನೆ ನೋವು ನಿಲುವುದೆ ಸಾವು ಹಿಂಗುವುದೆ

---

ಧಾವತಿಯೆ ಕಡೆತನಕ ತಪ್ಪದು
ಭಾವಿಸುವೊಡದು ಭವಿಗಳಂಗವಿ
ದಾವುದಲ್ಲದ ಮತವನೆಲೆ ಗೊಗ್ಗಯ್ಯ ಕೇಳೆಂದ ೪೬

"ಯಾವ ವ್ಯವಸಾಯವನ್ನು ಮಾಡಿದರೂ ಜೀವಕ್ಕೆ ವ್ಯಥೆಗಳು ತಪ್ಪವು. ಆದರಿಂದ ದೇವನು ಒಲಿವನೆ? ನೋವು ನಿಲ್ಲುವುದೆ? ಸಾವು ಹಿಂಗುವುದೆ? ಕೊನೆತನಕ ಚಿಂತೆ ತಪ್ಪುವುದೆ? ಭಾವಿಸುವುದಾದರೆ, ಅದು ಭವಿಗಳ ಉದ್ಯಮವು. ಇದಾವುದೂ ಅಲ್ಲ ವಿಚಾರವನ್ನು ಎಲೆ ಗೊಗ್ಗಯ್ಯ ಕೇಳು" ಎಂದನು.

ಸಾವೊಡೀ ಗುರು ಲಿಂಗ ಜಂಗಮ
ಸೇವೆ ತಾ ಮುನ್ನೇಕೆ ಹಸಿವಿನ
ಬೇವಸದಲಡಿಗಡಿಗೆ ಬೇವಗೆಯೊಕ್ಕುದುಣಲೇಕೆ
ಈ ವಿಧಿಯಲೇನುಂಟು ನೆಱೆ ನಿ
ರ್ಭಾವದಂಗವನಱಿಯದನ್ನಕ
ಸಾವುದಾದರೆ ಮಾಣದೈ ಗೊಗ್ಗಯ್ಯ ಕೇಳೆಂದ ೪೭

ಗೊಗ್ಗಯ್ಯಾ ಕೇಳು, ಸಾಯುವುದಾದರೆ ಗುರು ಲಿಂಗ ಜಂಗಮರುಗಳ ಸೇವೆ ತಾನೆ ಮೊದಲು ಏತಕ್ಕೆ ಬೇಕು? ಹಸಿವಿನ ದುಃಖದಲ್ಲಿ ಮೇಲಿಂದ ಮೇಲೆ ಬೆಂದು ಹೋಗುವುದಾದರೆ ಪ್ರಸಾದವನ್ನು ಉಂಡು ಪ್ರಯೋಜನವೇನು? ಈ ಕ್ರಮದಿಂದ ಫಲವೇನುಂಟು? ಚೆನ್ನಾಗಿ ಮನಸ್ಸನ್ನು ಲಯ ಮಾಡಿಸುವ ರೀತಿಯನ್ನು ತಿಳಿಯುವವರೆವಿಗೂ ಸಾಯುವುದು ತಪ್ಪದು ಎಂದನು.

ಬಡವನಕ್ಷಯನಿಧಿ ನಿಧಾನವ
ನೆಡಹುತಲಿ ಕಂಡಂತೆ ಕೈಕಾಲ್
ಮುಡುಬಗಳವಟ್ಟಂತೆ ಕುರುಡಗೆ ಕಣ್ಣು ಬಂದಂತೆ
ಬಿಡದೆಯಱಸುವ ಬಳ್ಳಿ ಕಾಲನು
ತೊಡರಿತೆಂಬಂತೆನ್ನ ಬಯಕೆಯ
ಕಡೆಯ ಕಂಡೆನೆನುತ್ತಲಲ್ಲಮ ನುಡಿದನುಚಿತದಲಿ ೪೮

ಬಡವನು ಅಕ್ಷಯ ನಿಧಿ, ಶಂಖಪದ್ಮಾದಿ ನವನಿಧಿಗಳನ್ನು ಎಡವಿ ಕಂಡಂತೆ, ಕೈಕಾಲುಗಳು ಹೆಳವನಿಗೆ ಹೊಂದಿದಂತೆ, ಕುರುಡನಿಗೆ ಕಣ್ಣು ಬಂದಂತೆ, ಬಿಡದೆ ಹುಡುಕುವ ಬಳ್ಳಿ ಕಾಲಿಗೇ ತೊಡರಿತು ಎಂಬಂತೆ ನನ್ನ ಬಯಕೆಯ ಕೊನೆಯನ್ನು ಕಂಡೆನು ಎನ್ನುತ್ತ ಅಲ್ಲಮನು ಯೋಗ್ಯರೀತಿಯಲ್ಲಿ ನುಡಿದನು.

ಮುಕ್ತಾಯಿಯಕ್ಕ :

ಗುಪ್ತಭಕ್ತಿಯ ಅಜಗಣ್ಣನು ಲಿಂಗೈಕ್ಯನಾದಾಗ, ಆತನ ತಂಗಿ ಮುಕ್ತಾಯಿಯಕ್ಕನು ದುಃಖಿಸುತ್ತಿರಲು ಅಲ್ಲಮಪ್ರಭು ಅಲ್ಲಿಗೆ ಬಂದು ಅಜಗಣ್ಣನ ಸಿದ್ಧಿಯ ಮಹತ್ವವನ್ನು

ತಿಳಿಸಿಕೊಡುವನು. ಮುಕ್ತಾಯಿಯಕ್ಕನಿಗೆ ಭಕ್ತಿಯ ಅರಿವು ಮಾಡಿಕೊಟ್ಟು ಮುಕ್ತನಾದ ಅಜಗಣ್ಣನ ಸ್ಥಿತಿಯನ್ನು ಸ್ಪಷ್ಟವಾಗಿ ಗುರು ಗುಹೇಶ್ವರನು ಕಾಣಿಸಿದನು.

ತಾಯೆ ಭಕ್ತರಿಗುಂಟೆ ಚಿಂತೆಗ
ಳಾಯಸಂಗಳು ಲೋಕಲೌಕಿಕ
ರಾಯತವ ನೀ ನೆಗಳಿ ಬಱದೆಗೆ ಹಲವ ಹಂಬಲಿಸಿ
ಬಾಯ ಬಿಡುಲಹುದೇ ವೃಥಾ ನಿ
ಷ್ಕಾಯದಜಗಣ್ಣಂಗೆ ಮರುಳೇ
ಮಾಯೆ ಮೋಹವಿದೇತಕೌ ಮುಕ್ತಾಯಿ ಕೇಳೆಂದ ೪೯

ಅಕ್ಕ ಕೇಳೌ ನಿನ್ನ ಹೆಸರಿಗೆ
ತಕ್ಕ ಬಯಕೆಯ ನೀನು ಬಯಸಿದೆ
ಮಿಕ್ಕ ಭವಭಾರಿಗಳು ಬಲ್ಲರೆ ಲಿಂಗಮಾರ್ಗವನು
ಹೊಕ್ಕು ಹೋರಟೆಯೆಲ್ಲವನು ಹೊ
ಯ್ದಿಕ್ಕಿ ಸುಖಿಸುವುದೆಂತು ನಿಜಪದ
ದಿಕ್ಕೆ ನಿನಗಹುದೆಂದೆನುತೆ ಮುಕ್ತಾಯಿಗಿಂತೆಂದ ೫೦

## ಸಿದ್ಧರಾಮು :

ಸಿದ್ಧರಾಮನ ಒಂದು ಮಟ್ಟದ ಯೋಗಸಾಧನೆಯನ್ನು ಬಲ್ಲ ಅಲ್ಲಮಪ್ರಭುವಿಗೆ ಕೀರ್ತಿಗೋಸ್ಕರ ದೇಗುಲ ಕಟ್ಟಿಸುವ ಕಾರ್ಯದಲ್ಲಿ ಆತನು ನಿರತನಾಗಿದ್ದುದು ಅಚ್ಚರಿಯನ್ನುಂಟು ಮಾಡಿದೆ. ಆತನನ್ನು ನಿಜವಾದ ಯೋಗಿಯನ್ನಾಗಿ ಪರಿವರ್ತಿಸಲು ಅಲ್ಲಮಪ್ರಭು ಯೋಚಿಸಿ, ಅತ್ಯಂತ ನಾಟಕೀಯವಾಗಿ ಸಿದ್ಧರಾಮನ ಜನರೊಂದಿಗೆ ಹಾಗೂ ಸಿದ್ಧರಾಮನೊಂದಿಗೆ ವರ್ತಿಸುವದನ್ನಿಲ್ಲಿ ಕಾಣಬಹುದು. ವ್ಯಂಗ್ಯ ವಿನೋದಗಳಿಂದ ಕೂಡಿದ ಇಲ್ಲಿಯ ಸನ್ನಿವೇಶ ಮನೋಜ್ಞವಾಗಿರುವುದನ್ನೂ ಗಮನಿಸಬಹುದು.

ಒಡ್ಡ ರಾಮನಿದೇನು ಗೊಡವೆಯ
ನೊಡ್ಡಿಕೊಂಡು ವೃಥಾ ಮನಸ್ಸನು
ಗೊಡ್ಡಮಾಡಿಯೆ ಕೆಟ್ಟನೆನುತಲ್ಲಮನು ಕೇಳಿದೊಡೆ
ಗುಡ್ಡರೆಲ್ಲರು ಗುರುವನಾವನು
ಖಡ್ಡತನದಲಿ ಜಱಿವನೆನುತವ
ರಡ್ಡಹಾಯ್ದರು ತೊಡಗಿದರು ತೋಟಿಯನು ತಮತಮಗೆ ೫೧

ಸಿದ್ಧರಾಮನನ್ನು ಒಡ್ಡನೆಂದು ಜರೆಯುವ ಅಲ್ಲಮನ ಮೇಲೆ ಕೋಪಿಸಿಕೊಂಡ ಗುಡ್ಡರು ಆತನನ್ನು ಹಿಡಿದು ಬಂಧಿಸಲು ಯತ್ನಿಸುವರು. ಬಯಲದೇಹಿಗನಾದ ಆತನು ಅವರ ಕೈಗೆ ಸಿಕ್ಕದೇ ಹೋಗುವನು. ಆಗ ಅವರು ಕೆರಳಿ ಕಲ್ಲಮಳೆಯನ್ನು ಸುರಿಸುವರು. ಆ ಕಲ್ಲುಗಳು ಆವನನ್ನು ನೋಯಿಸದೇ ಹೋಗುವುವು. ನಿರ್ಲೇಪನಾಗಿರುವ ಅಲ್ಲಮನ ಇರುವಿಕೆ ಅವರಿಗೆ ಅಚ್ಚರಿಯನ್ನುಂಟು ಮಾಡುವುದು. ಚಾಮರಸನು ಇಲ್ಲಿ ಅಲ್ಲಮನ ಶಕ್ತಿ ಮತ್ತು ವ್ಯಕ್ತಿತ್ವವನ್ನು

ತುಂಬಾ ಚೆನ್ನಾಗಿ ಚಿತ್ರಿಸಿದ್ದಾನೆ. ಮಾತಿಗೆ ಮಾತು ಬೆಳೆಯುತ್ತ ಪ್ರಭುವಿನ ವ್ಯಂಗ್ಯೋಕ್ತಿಗಳು ಸಿದ್ಧರಾಮನನ್ನು ಕೆರಳಿಸಿ, ಆತನ ಹಣೆಗಣ್ಣಿನ ಕಿಡಿಯನ್ನು ಕೆದರುವಂತೆ ಮಾಡಿದವು. ಆಗ ಅಲ್ಲಮಪ್ರಭು.

ನೊಸಲ ಕಣ್ಣನು ತೋಱುವವರಿಗೆ
ವಿಷಮತರದಂಗಾಲ ಕಣ್ಣನು
ಪಸರಿಸುವರುಂಟಕಟ ಮರುಳೇ ನಿನ್ನ ಹವಣೇನು
ಸಸಿನೆ ಮಾಣಿನ್ನಾದೊಡೆಯು ಗ
ರ್ವಿಸುವ ಬುದ್ಧಿಯನೆನುತ ಮಿಗೆ ಬೋ
ಧಿಸಿದನೊಲವಿಂದಲ್ಲಮಪ್ರಭು ಸಿದ್ಧರಾಮಂಗೆ [೫೨]

ತನ್ನನ್ನು ನಿಂಧಿಸಿದ, ತನ್ನ ಹಣೆಗಣ್ಣಿನ ಕಿಡಿಯನ್ನು ಕೆರಳುವಂತೆ ಮಾಡಿದ ವ್ಯಕ್ತಿ ಯಾರು? ಎಂಬ ನಿಜ ಸಂಗತಿ ತಿಳಿದ ಅಲ್ಲಮನ ಮನ ಹೇಗೆ ನಾಚುತ್ತದೆ ಎಂಬುದನ್ನು ಕವಿ ಈ ಕೆಳಗಿನಂತೆ ಚಿತ್ರಿಸಿದ್ದಾನೆ.

ನಾಚಿದುದು ಮನ ನೊಸಲ ಕಣ್ಣಿಗೆ
ಚಾಚಿದವು ಬಳಿಕೆವೆಯ ಕದಗಳು
ಸೂಚಿಸಿತು ಪರಿಪಾಕ ಭಾವನೆ ಚಿತ್ತವೃತ್ತಿಯಲಿ
ಆಚರಿಸಿತನುತಾಪ ಗರ್ವಕೆ
ಮೋಚನವೆ ಮುಖವಾಯ್ತು ಯೋಗದ
ಶೌಚತೆಗೆ ಬೇರೂಱುತಿರ್ದುದು ಸಿದ್ಧರಾಮನಲಿ [೫೩]

ಹೀಗೆ ತನ್ನ ತಪ್ಪಿಗೆ ಮನನೊಂದ ಸಿದ್ಧರಾಮನು ಕುರಿಗಳಾದರೊ ತಮ್ಮನ್ನು ಕಾಪಾಡಿದ ಒಡೆಯನ ಬೆನ್ನು ಬಿಡವು. ನಾನು ಆ ಕುರಿಗಳಿಗಿಂತ ಕನಿಷ್ಠನಾದೆನಲ್ಲಾ ಎಂದು ಪಶ್ಚಾತ್ತಾಪ ಪಡುತ್ತಾ ಅಲ್ಲಮನ ಮುಂದೆ ಕರುಣಾಕರನೆ ರಕ್ಷಿಸು, ಎಲ್ಲಾ ತಪ್ಪು ನನ್ನದು. ನಿನ್ನನ್ನು ತಿಳಿಯದೆ ಇಲ್ಲಿಯವರೆವಿಗೂ ಮೋಹ ಮಾಯಡಂಬರಕ್ಕೆ ಮರುಳಾದೆ. ಊಹೆ ಮಾಡಲಾಗದಷ್ಟು ಕೇಡನ್ನು ಮಾಡಿರುವ ನನ್ನ ಅವಗುಣಗಳ ಮೊತ್ತವನ್ನು ನೀನು ಮರೆತು ಕರುಣಿಸಬೇಕು ಎಂದು ಬೇಡುತ್ತಾ ಆತನ ಪಾದಗಳಿಗೆ ನಮಸ್ಕರಿಸಿ ತನ್ನ ಮಠಕ್ಕೆ ಆಹ್ವಾನಿಸುತ್ತಾನೆ.

ಆಗ ಅಲ್ಲಮ

ಬಿಡುಮರುಳೆ ಮನೆಯೇನು ಮಠವೇ
ನಡುವಿಯೇ ನೂರೇನು ಬೇಂ
ದೆಡೆಗಳುಂಟೇ ಸರ್ವಗತನಾದಾ ಮಹಾತ್ಮಂಗೆ
ನುಡಿದುದೇ ಶಿವತತ್ವದಾಗಮ
ನಡೆದುದೇ ಶಿವಮಾರ್ಗ ಶರಣರ
ಬೆಡಗು ತಾನೀ ಪರಿ ಕಣಾ ರಾಮಯ್ಯ ಕೇಳೆಂದ [೫೪]

ಹೀಗೆ ಹಲವು ವಿಧದಲ್ಲಿ ಅಲ್ಲಮಪ್ರಭು ಸಿದ್ಧರಾಮನಿಗೆ ಉಪದೇಶಿಸುವನು.

---

ಕಾಯಕರಣದ ಸಂದು ಸಂಬಂಧವನ್ನು ಸೂಚಿಸುವ ಈ ಉದ್ಬೋಧೆಯಿಂದ ಸಿದ್ಧರಾಮನು ನಿಜವಾದ ಸಾಧನೆಯನ್ನು ಅರಿತುಕೊಳ್ಳುವನು.

### ಪ್ರಭುದೇವರು ಕಲ್ಯಾಣಕ್ಕೆ ಬಂದುದು :

ಅಕ್ಕಮಹಾದೇವಿ, ಸಿದ್ಧರಾಮ, ಮಡಿವಾಳ ಮಾಚಿದೇವ, ಬಸವಣ್ಣ, ಚೆನ್ನಬಸವಣ್ಣ ವೊದಲಾದವರ ಜನನವನ್ನು ತೀರ ಸಂಕ್ಷಿಪ್ತವಾಗಿ ಚಾಮರಸನು ಇಲ್ಲಿ ಚಿತ್ರಿಸಿರುವನು. ಸಾತ್ವಿಕ ಕಳೆಯಾದ ಅಕ್ಕಮಹಾದೇವಿಗಿಲ್ಲಿ ಆದ್ಯತೆ ದೊರಕಿರುವುದನ್ನು ಕಾಣಬಹುದು.ಅಲ್ಲಮಪ್ರಭು ಸಿದ್ಧರಾಮನೊಡಗೂಡಿ ಕಲ್ಯಾಣಕ್ಕೆ ಬರುವನು. ಸುತ್ತುಮುತ್ತಲಿನ ಪರಿಸರದಲ್ಲಿ ಬಸವಣ್ಣನ ಭಕ್ತಿಯ ವಿಶೇಷತೆಗಳನ್ನು ಕಾಣುವನು. ಕಲ್ಯಾಣದಲ್ಲಿ ಬಸವರಾಜನ ಮಂದಿರಕ್ಕೆ ಬಂದಾಗ ಆತನು ಪೂಜಾತುರತೆಯಲ್ಲಿದ್ದನು. ಅಲ್ಲಮಪ್ರಭುಗಳನ್ನು ಬರಮಾಡಿಕೊಳ್ಳಲು ಹಡಪದಪ್ಪಣ್ಣನಿಗೆ ತಿಳಿಸುವನು. ಅಪ್ಪಣ್ಣನು ಪ್ರಭುವಿನಲ್ಲಿ ಭಕ್ತಿಯಿಂದ ದಯಮಾಡಿಸಲು ವಿನಂತಿಸಿಕೊಂಡಾಗಲೂ, ಆತನು ನಿರಾಕರಿಸಿ, ಅರಸುಮನೆಯಲ್ಲಿ ತಮಗೇನು ಕೆಲಸವೆಂದು ಹೇಳಿದಾಗ, ಅಪ್ಪಣ್ಣ ಒಳಗೆ ಬಂದು ಬಸವಣ್ಣನಿಗೆ ವಿಷಯವನ್ನು ತಿಳಿಸುವನು. ಬಸವಣ್ಣನು ಕೂಡಲೇ ಪ್ರಭುವಿನ ಸನ್ನಿಧಿಗೆ ಬಂದು ಭಯಭಕ್ತಿಯಿಂದ ಬಿನ್ನವಿಸಿಕೊಳ್ಳುವನು. ಈ ಸನ್ನಿವೇಶವನ್ನು ಚಾಮರಸ ಚೆನ್ನಾಗಿ ಬರೆದಿದ್ದಾನೆ.

ಕರತಳದೊಳಿಡೆಗೊಂಡು ಪೂಜಾ
ತುರತೆಯಿಂದಿರುತೊಲಿದು ತಾನೇ
ಚರವನಂಗೀಕರಿಸಿ ಬಂದೊಡೆ ಲೇಸು ಲೇಸೆನುತೆ
ಕರೆಯಿರೇ ಇನ್ನೊಳಯಕೆನ್ನೊಡೆ
ಯರನು ತಳುವೇಕೆನುತೆ ಬಸವನು
ಹರುಷದಿಂದಲಿ ಹಡಪದಪ್ಪಣಂಗೆ ನೇಮಿಸಿದ ೫೫

ಬಸವರಾಜನು ಭಕ್ತಿಯಿಂದಲಿ
ಬೆಸಸಿದರೆಯಪ್ಪಣ್ಣನತಿಭರ
ವಸದಲೆಯ್ತಂದಲ್ಲಮಪ್ರಭು ಸಿದ್ಧರಾಮರಿಗೆ
ಒಸೆದು ಮಿಗೆ ಶರಣಾರ್ಥಿಯೆನುತವೆ
ಸಸಿನೆ ಸಮ್ಮುಖದಲ್ಲಿ ಕರೆಯುಗ
ಬಿಸುರುಹಂಗಳ ಮುಗಿದು ಭಿನ್ನಹ ಮಾಡಲನುಗೆಯ್ದ ೫೬

ಅಂಗೈಯಲ್ಲಿ ಇಷ್ಟಲಿಂಗವನ್ನು ವಿಜಯಮಾಡಿಸಿ ಪೂಜಾತುರತೆಯಿಂದಿರುತ್ತಿದ್ದ ಬಸವಣ್ಣನು ತಾನೇ ಲಿಂಗದೇವನು ಸಂಗಮರೂಪವನ್ನು ತಾಳಿ ಬಂದರೆ ಒಳ್ಳೆಯದು, ಇನ್ನು ಒಡೆಯರನ್ನು ಒಳಗಡೆಗೆ ಕರೆಯಿರೇ, ತಡವೇಕೆ? ಎಂದು ಹರುಷದಿಂದ ಹಡಪದಪ್ಪಣ್ಣನಿಗೆ ಆ ಕಾರ್ಯವನ್ನು ನೇಮಿಸಿದನು. ಬಸವರಾಜನು ಭಕ್ತಿಯಿಂದ ಹೇಳಲು ಅಪ್ಪಣ್ಣನು ಬೇಗಬೇಗನೆ ಬಂದು ಪ್ರೀತಿಯಿಂದ ಉಬ್ಬಿ ಅಲ್ಲಮಪ್ರಭು ಸಿದ್ಧರಾಮರಿಗೆ ಶರಣಾರ್ಥಿ ಎಂದು ಹೇಳಿ ಮುಂದೆ ಕೈ ಜೋಡಿಸಿ ನಿಂತು ಹೀಗೆ ಬಿನ್ನಹಮಾಡಲು ತೊಡಗಿದನು.

ಹರಹರಾ ನಾನಕಟ ಗರ್ವದ
ಗಿರಿಯನೇನಡರಿರ್ದೆನೋ ಮೇಣ್
ದುರುಳತನದಲಿಯೆನ್ನ ನಡೆನುಡಿ ತಪ್ಪನಪ್ಪಿದುವೊ
ಗುರುವೆ ಕರುಣಿಸಿ ಬಂದು ಬಾರದೆ
ತರಹರಿಸಲೇಕೆನುತೆ ಚಿಂತಾ
ಶರಧಿಯೊಳಗದ್ದಿದನು ಕೇಳುತೆ ಬಸವ ಮನದೊಳಗೆ [೫೭]

ಆ ಮಾತನ್ನು ಕೇಳಿ, ಶಿವಶಿವಾ ! ಅಯ್ಯೋ ನಾನು ಗರ್ವದ ಪರ್ವತವನ್ನು ಹತ್ತಿದೆನೊ ಅಥವಾ ದುಷ್ಟತನದಿಂದ ನನ್ನ ನಡೆನುಡಿ ತಪ್ಪನ್ನು ಅಪ್ಪಿದುವೊ? ಗುರುವೇ, ನನ್ನ ಮೇಲೆ ಕರುಣೆಯಿಟ್ಟು ಬಂದು ಒಳಗೆ ಬಾರದೆ ನಿಧಾನಿಸುದುದೇಕೆ ಎಂದು ಬಸವನು ಮನದಲ್ಲಿ ಚಿಂತೆಯೆಂಬ ಸಮುದ್ರದಲ್ಲಿ ಮುಳುಗಿದನು.

ದೇವ ದೇವಾ ಸಿದ್ಧರಾಮಯ
ದೇವರೆಂದೋಪಾದಿಯಲಿ ಮು
ನ್ನಾವ ಭಕ್ತಿಯ ಕಂಡು ಬಿಜಯಂಗೆಯ್ದೆ ನಮಗೊಲಿದು
ಪಾವನವ ಮಾಡಲಿಕೆ ಬಂದಿ
ನ್ನಾವ ಕೊಱತೆಯನೆಣಿಸದೆಮ್ಮನು
ಕಾವುದೆನುತಲಿ ಮತ್ತೆ ಮಣಿದನು ಬಸವನಲ್ಲಮಗೆ [೫೮]

ದೇವ ದೇವಾ, ಸಿದ್ಧರಾಮಯ್ಯ ದೇವರು ಹೇಳಿದ ರೀತಿಯಲ್ಲಿ ಹಿಂದೆ ಯಾವ ಭಕ್ತಿಯನ್ನು ಕಂಡು ನೀನು ದಯಮಾಡಿಸಿದ್ದೆ? ನಮಗೆ ಒಲಿದು ನಮ್ಮನ್ನು ಪವಿತ್ರರನ್ನಾಗಿ ಮಾಡಲಿಕ್ಕೆ ಬಂದೆ. ಮತ್ತಾವ ಕೊರತೆಯನ್ನೂ ಭಾವಿಸದೆ ನಮ್ಮನ್ನು ರಕ್ಷಿಸುವುದು ಎಂದು ಮರಳಿ ಬಸವನು ಅಲ್ಲಮನಿಗೆ ಬಾಗಿ ನಮಸ್ಕರಿಸಿದನು. ನಂತರ ಅಲ್ಲಮು ಬಸವಣ್ಣನವರನ್ನು ಕ್ಷಮಿಸಿ, ಅವರಿಗೆ ತಿಳಿಹೇಳಿ, ಆತಿಥ್ಯ ಸ್ವೀಕರಿಸುತ್ತಾನೆ.

### ಮರುಳು ಶಂಕರದೇವರು :

ಒಕ್ಕುಮಿಕ್ಕು ಪ್ರಸಾದ ಸೇವಿಸಿ, ಗುಪ್ತಭಕ್ತನಾಗಿದ್ದ ಮರುಳಶಂಕರನನ್ನು ಸಿದ್ಧರಾಮನಿಗೆ ಹಾಗೂ ಎಲ್ಲ ಶರಣರಿಗೆ ಅಲ್ಲಮ ಪ್ರಭು ಪರಿಚಯಿಸುವುದು.

ಶಿಲೆಯ ಮಱೆಯಲಿ ಹೊನ್ನು ನೆಟ್ಟನೆ
ತಿಲದ ಮಱೆಯಲಿ ತೈಲ ಭಾವಿಸೆ
ನೆಲದ ಮಱೆಯ ನಿಧಾನವಿಹವೊಲು ಮರುಳ ವೇಷದಲಿ
ಬಳಿಯಲಿರೆ ಸಾಕಾರ ಶಂಕರ
ನೆಲಸಿ ತನ್ನಂಗಣದಲಾತನ
ಹೊಲಬನಱಿಯನು ಬಸವನೆನುತಲ್ಲಮನು ಬೆಱಗಾದ [೫೯]

ಹೀಗೆ ಅನೇಕ ಮಹಾತ್ಮರನ್ನು ಗುರುತಿಸುವ ಮತ್ತು ಪರಿಚಯಿಸುವ ಅಲ್ಲಮಪ್ರಭು ಶರಣರೆಲ್ಲರಿಗೂ ನಿತ್ಯ ಸುಖ ಕೊಡಲು ವರ್ತಿಸಿದ ಬಗೆಗಳನ್ನು ಒಂದು ಪದ್ಯದಲ್ಲಿ ಚಾಮರಸನು

---

ವರ್ಣಿಸಿದ್ದು ಹೀಗೆ:

ಆಡಿ ಕೆಲರಿಗೆ ಕರುಣದಲಿ ಮಾ
ತಾಡಿ ಕೆಲರಿಗೆ ನುಡಿಸಿ ಕೆಲರಿಗೆ
ನೋಡಿ ಕೆಲರಿಗೆ ಜಱಿದು ಕೆಲರಿಗೆ ಜಡಿದು ಕೆಲಬರಿಗೆ
ಹಾಡಿ ಕೆಲರಿಗೆ ಹರಸಿ ಕೆಲರಿಗೆ
ಕೊಡಬಲ್ಲನು ನಿತ್ಯಸುಖವನು
ರೂಢಿಯೊಳು ಘನಮಹಿಮನೆಮ್ಮಯ ಗುರು ಗುಹೇಶ್ವರನು [೬೦]

ಗುರುಗುಹೇಶ್ವರನು ಲೀಲೆಯಿಂದ ಮರುಳುಶಂಕರದೇವರಿಗೆ ಸಹಜಪರಮ ಪದವಿಯನ್ನು ಲೋಕಕ್ಕೆ ತಿಳಿಯುವಂತೆ ಅನುಗ್ರಹಿಸಿ ಶೋಭಿಸಿದನು.

ಇಷ್ಟಲಿಂಗ :

ಬಸವಣ್ಣನು ಅಲ್ಲಮಪ್ರಭುವಿನ ಮೂಲಕ ಇಷ್ಟಲಿಂಗದ ಸಾಧನೆಯನ್ನು ತಿಳಿದುಕೊಳ್ಳುವುದಿಲ್ಲಿ ಚಿತ್ರಿತವಾಗಿದೆ. ಇಷ್ಟಲಿಂಗೋಪಾಸನೆಯ ವಿಧಾನವನ್ನು ತಿಳಿಸುವ ಪೂರ್ವದ ಅಲ್ಲಮಪ್ರಭು ಬಸವಣ್ಣನವರ ವ್ಯಕ್ತಿತ್ವವನ್ನು ಕುರಿತು ಹೇಳುವ ಕೆಲವು ಮಾತುಗಳೂ ಗಮನಾರ್ಹವಾಗಿದೆ.

ನಿರಹಂಕಾರ ನಿಧಿಯಾದ ಬಸವಣ್ಣನು ಪ್ರಾರ್ಥಿಸಿದಾಗ, ಲಿಂಗದ ಮಹಾಸೇವಾನುಭಾವವನ್ನು ಅಲ್ಲಮಪ್ರಭು ವಿವರಿಸತೊಡಗುವನು.

ಪ್ರಾಣವಿದು ನೋಡೆಂದು ಪ್ರತಿಗುರು
ವಾಣತಿಯನಿದಿರಿಡಲು ಕಣ್ಣಿಗೆ
ಕಾಣಿಸುವ ತನ್ನಿಷ್ಟಲಿಂಗವನತಿಸಮೇಳದಲಿ
ಮಾಣದಾಗಳು ಹಿಡಿದು ಹಿಂಗದೆ
ಕೇಣವಿಲ್ಲದೆ ನಿಂದ ನಿಷ್ಠೆಯ
ಜಾಣನೇ ಶಿವಭಕ್ತನಹನೈ ಬಸವ ಕೇಳೆಂದ [೬೧]

ಲಿಂಗ ಪೂಜೆ, ಲಿಂಗಧಾರಣೆಗೆ ಸಂಬಂಧಿಸಿ ತಾತ್ತ್ವಿಕ ಹಿನ್ನಲೆಯಲ್ಲಿಯೇ ಹಲವು ವಿಚಾರಗಳನ್ನು ಅಲ್ಲಮಪ್ರಭು ತಿಳಿಸಿಕೊಡುವನು. ಇಲ್ಲೆಲ್ಲ ಶಿವಭಕ್ತಿಯ ಮಹತ್ವವೇ ಎದ್ದು ಕಾಣುವುದು. ಎಂಥೆಂಥವರಿಗೆ ಶಿವಭಕ್ತಿ ದೊರೆಯಲಾರದೆಂಬ ಬಗ್ಗೆಯೂ ವಿವರಿಸಲಾಗಿದೆ.

ಗೋರಕ್ಷ :

ಕಲ್ಯಾಣದ ತನ್ನ ವಾಸ್ತವ್ಯದಲ್ಲಿ ಅಲ್ಲಮನು ಅನುಭವ ಮಂಟಪದ ಒಳಗೆ ಹಾಗೂ ಹೊರಗೆ ಶರಣರಿಗೆ ನಿಜದ ನೆಲೆಯನ್ನು ಅರುಹುತ್ತಿದ್ದ. ಗೋರಕ್ಷ ಎಂಬುವವನು ಕಾಪಾಲ ಮಾರ್ಗದ ಸಾಧಕ. ಶ್ರೀಗಿರಿಯಲ್ಲಿ ನೆಲಸಿ ತಾಂತ್ರಿಕ ಸಾಧನೆಗಳಿಂದ ದೇಹವನ್ನು ವಜ್ರದಂತೆ

ಮಾಡಿಕೊಂಡಿ ರುತ್ತಾನೆ. ಆದರೆ ಬಾಹ್ಯ ಸಾಧನೆಗಳಲ್ಲಿ ಹುರುಳಿಲ್ಲವೆನ್ನುವುದನ್ನು ತೋರಿಸಲು ಈ ಬಗೆಯ ಪ್ರಸಂಗವೊಂದನ್ನು ಕವಿ ಸೇರಿಸಿರುವಂತಿದೆ. ತಾನೆ ಗೋರಕ್ಷಕನಲ್ಲಿಗೆ ಹೋದ ಅಲ್ಲಮನ ಪರಿ, ರೋಗಿಯಲ್ಲಿಗೆ ಅಮೃತವೇ ಹೋದಂತಿತ್ತು.ಇನ್ನಾದರೂ ಈತನ ಬೆಡಗನ್ನು ಹಾಗೂ ಸಿದ್ಧತನವನ್ನು ತಾನು ನೋಡಬೇಕು. ಆತನಿಗೆ ಸತ್ಯದರ್ಶನ ಮಾಡಿಸಬೇಕು ಎಂದು ಗೋರಕ್ಷಕನನ್ನು ಭೇಟಿಯಾಗುತ್ತಾನೆ. ಅಲ್ಲಮಪ್ರಭುವು ಗೋರಕ್ಷನಾಥನಿಗೆ ಇಷ್ಟಲಿಂಗ ತತ್ವವನ್ನು ಕೆಳಗಿನಂತೆ ತಿಳಿಯ ಪಡಿಸಿದನು.

ಎಲೆ ಮರುಳೆ ಮೃದುವಾದ ಮಾಯೆಯ
ಬಲೆಯ ಬಲ್ಲಿತ ಮಾಡೆ ಸಾವನು
ಗೆಲಿದೆನೆಂದು ನಿರರ್ಥದಲಿ ಹಾರೈಸದಿರು ಬಱಿದೆ
ತಿಳಿವೊಡೀ ತನು ತಾನೆ ಕಾಲನ
ನಿಳಯ ನೀನಿದ ನಂಬಿ ನುಡಿದರೆ
ಪ್ರಳಯ ನಿನ್ನನ್ನು ಬಿಡುವುದೇ ಗೋರಕ್ಷ ಕೇಳೆಂದ [೬೨]

ಆದೊಡ್ಡಿನ್ನೇಳೇಳು ಹಿಡಿ ಹಿಡಿ
ಕೈದುವಿದೆ ಕೋ ತನ್ನ ತನುವನು
ಹೊಯ್ದು ನೋಡಾ ನೀನು ನಿನ್ನಾಪನಿತು ಸತ್ವದಲಿ
ಕೂದಲೊಳಗೊಂದಿನಿತು ಹಱಿಮುಱಿ
ಯಾದರಕಟಾ ನಾನು ಸಿದ್ಧನೆ
ವಾದವೇತಕೆ ದೃಷ್ಟವಿರಲಾ ಪ್ರಭುವೆ ನೋಡೆಂದ [೬೩]

ಕಾಯ ಬಲಿದರೆಮಾಯೆ ಬಲಿವುದು
ಮಾಯೆ ಬಲಿದರೆ ಛಾಯೆ ಬಲಿವುದು
ಕಾಯ ಮಾಯಾ ಛಾಯೆ ಬಲಿದರೆ ಸಿದ್ಧತನವಲ್ಲ
ಕಾಯ ಮಾಯಾ ಛಾಯದಾಗಿನ
ದಾಯವನು ಕಳೆದುಳಿದನಾದೊಡೆ
ರಾಯತನು ಸಿದ್ಧರಲಿ ಗೋರಕ್ಷ ಕೇಳೆಂದ [೬೪]

ಅಲ್ಲಮನ ಬಯಲದೇಹವನ್ನು ತನ್ನ ಕತ್ತಿಯಿಂದ ಕತ್ತರಿಸಲಾಗದೆ ಗೋರಕ್ಷಾ ಅಚ್ಚರಿಗೊಳ್ಳುತ್ತಾನೆ. ದೇಹವನ್ನು ವಜ್ರದಂತೆ ಗಟ್ಟಿಮಾಡಿಕೊಳ್ಳುವುದೇ ಸಾಧನೆಯಲ್ಲ, ದೇಹವಿದ್ದೂ ಇಲ್ಲದಂತಾಗಿಸಿಕೊಳ್ಳುವುದು ಸಾಧನೆ ಎಂದು ಅರಿತನು. ಹೀಗೆ ಅಲ್ಲಮನು ತಾನು ಭೇಟಿ ಮಾಡಿದವರನ್ನೆಲ್ಲಾ ಸರಿದಾರಿಗೆ ತಂದು ಜಗದ ಗುರುವಾಗುವುದನ್ನು ಇಲ್ಲಿ ಚಿತ್ರಿಸಲಾಗಿದೆ.

ಇಂಥ ಜಗದಗುರು ಪ್ರಭುಲಿಂಗದೇವನಿಗೆ ಬಸವಣ್ಣನು ಸೂಕ್ತ ಗೌರವವನ್ನು ನೀಡಿದ್ದನ್ನು ಕವಿ ಚಿತ್ರಿಸಿದ್ದಾನೆ. ತನಗೆ ತಾನೇ ಸಾಧಿಸಿ ಸಿದ್ಧಿಯೆಂಬ ಸಂಪತ್ತನ್ನು ಪಡೆದು ಅದನ್ನು ಮುಂದುಮಾಡಿ 'ಶೂನ್ಯ ಸಿಂಹಾಸನ'ವನ್ನು ಬಸವದಂಡೇಶನು ನಿರ್ಮಿಸಿದನು. ಪ್ರಭುದೇವರು ಬಸವಣ್ಣ ಮತ್ತು ಶರಣರ ಕೋರಿಕೆಯಂತೆ ಆ ಸಿಂಹಾಸನವನ್ನು ಅಲಂಕರಿಸುತ್ತಾರೆ. ಇಂಥ ಪ್ರಭುದೇವರು ಬಸವಣ್ಣನು ಸಾವಿರಾರು ಜಂಗಮರಿಗಾಗಿ ಮಾಡಿಸಿದ್ದ ಊಟವನ್ನೆಲ್ಲ ತಾವೊಬ್ಬರೆ ಆರೋಗಣೆ ಮಾಡಿದ ಪವಾಡವನ್ನು ಚಾಮರಸ ಸೊಗಸಾಗಿ ಚಿತ್ರಿಸಿದ್ದಾನೆ. ಶಿವನು ಊಟ ಮಾಡಿದರೆ ಜಗದ

ಸರ್ವಜೀವಿಗಳ ಹಸಿವು ನಿವಾರಣೆಯಾಗುತ್ತದೆಂಬ ದರ್ಶನವನ್ನು ಕವಿ ಇಲ್ಲಿ ನೀಡಿದ್ದಾನೆ. ಹೀಗೆ ಅಲ್ಲಮಪ್ರಭು ಬೇರೆಯಲ್ಲ ಶಿವ ಬೇರೆಯಲ್ಲ ಎಂದು ಇಬ್ಬರನ್ನು ಅಭಿನ್ನವಾಗಿ ಚಿತ್ರಿಸಿ, ನೂರಾರು ಸಾಧಕರಿಗೆ ಸೂಕ್ತವಾದ ಮಾರ್ಗದರ್ಶನ ನೀಡಿ, ಅವರ ಇತಿಮಿತಿಗಳನ್ನೆಲ್ಲ ತಿಳಿಸಿ ಅವರಿಗೆಲ್ಲ ಗುರುವಾಗಿ ಪ್ರಭುಲಿಂಗದೇವನು ಮೆರೆದ ರೀತಿಯನ್ನು ಚಾಮರಸನು ಅದ್ಭುತವಾಗಿ ಈ ಕಾವ್ಯದಲ್ಲಿ ಚಿತ್ರಿಸಿದ್ದಾನೆ.

## ಅಡಿಟಿಪ್ಪಣಿಗಳು :

೦೧. ಹರಿಹರ ವಿಚಾರ ಸಂಕೀರ್ಣ : ವಿವಿಧ ಲೇಖಕರು : ಪು.ಸಂ. ೩೮
೦೨. ಕನ್ನಡ ಅಧ್ಯಯನ ಸಂಸ್ಥೆಯ ಕನ್ನಡ ಸಾಹಿತ್ಯ ಚರಿತ್ರೆ : ಹಾ.ಮಾ. ನಾಯಕ : ಪು.ಸಂ. ೧೩೭೬
೦೩. ನೂತನ ಪುರಾತನರ ರಗಳೆಗಳು : ಎಂ.ಎಸ್. ಸುಂಕಾಪುರ : ಪು.ಸಂ. ೩
೦೪. ಅದೇ : ಪು.ಸಂ. ೪
೦೫. ನೂತನ ಪುರಾತನರ ರಗಳೆಗಳು : ಎಂ.ಎಸ್. ಸುಂಕಾಪುರ : ಪು.ಸಂ. ೭
೦೬. ಅದೇ : ಪು.ಸಂ. ೪
೦೭. ನೂತನ ಪುರಾತನರ ರಗಳೆಗಳು : ಎಂ.ಎಸ್. ಸುಂಕಾಪುರ : ಪು.ಸಂ. ೫
೦೮. ಅದೇ : ಪು.ಸಂ. ೫
೦೯. ಅದೇ : ಪು.ಸಂ. ೫
೧೦. ನೂತನ ಪುರಾತನರ ರಗಳೆಗಳು : ಎಂ.ಎಸ್. ಸುಂಕಾಪುರ : ಪು.ಸಂ. ೭
೧೧. ಅದೇ : ಪು.ಸಂ. ೯
೧೨. ಅದೇ : ಪು.ಸಂ. ೧೦
೧೩. ಅದೇ : ಪು.ಸಂ. ೧೦
೧೪. ಅದೇ : ಪು.ಸಂ. ೧೩
೧೫. ಅದೇ : ಪು.ಸಂ. ೧೫
೧೬. ಅದೇ : ಪು.ಸಂ. ೧೯
೧೭. ಅದೇ : ಪು.ಸಂ. ೧೦
೧೮. ಅದೇ : ಪು.ಸಂ. ೧೧, ೧೨
೧೯. ಅದೇ : ಪು.ಸಂ. ೧೮
೨೦. ಚಾಮರಸ : ಜಿ.ಎಸ್. ಕಾಪಸೆ : ಪು.ಸಂ. ೬
೨೧. ಚಾಮರಸನ ಪ್ರಭುಲಿಂಗಲೀಲೆ : ಎಸ್. ವಿದ್ಯಾಶಂಕರ : ಪು.ಸಂ. ೨
೨೨. ಅದೇ : ಪು.ಸಂ. ೨೧
೨೩. ಅದೇ : ಪು.ಸಂ. ೨೮
೨೪. ಅದೇ : ಪು.ಸಂ. ೩೩
೨೫. ಅದೇ : ಪು.ಸಂ. ೩೩
೨೬. ಚಾಮರಸನ ಪ್ರಭುಲಿಂಗಲೀಲೆ : ಎಸ್. ವಿದ್ಯಾಶಂಕರ : ಪು.ಸಂ. ೩೪
೨೭. ಅದೇ : ಪು.ಸಂ. ೩೪
೨೮. ಅದೇ : ಪು.ಸಂ. ೩೯
೨೯. ಅದೇ : ಪು.ಸಂ. ೫೦
೩೦. ಅದೇ : ಪು.ಸಂ. ೫೦
೩೧. ಚಾಮರಸನ ಪ್ರಭುಲಿಂಗಲೀಲೆ : ಎಸ್. ವಿದ್ಯಾಶಂಕರ : ಪು.ಸಂ. ೭೩
೩೨. ಅದೇ : ಪು.ಸಂ. ೮೩
೩೩. ಅದೇ : ಪು.ಸಂ. ೯೯

---

೩೪. ಅದೇ : ಪು.ಸಂ. ೧೦೯
೩೫. ಚಾಮರಸನ ಪ್ರಭುಲಿಂಗಲೀಲೆ : ಎಸ್. ವಿದ್ಯಾಶಂಕರ. : ಪು.ಸಂ. ೧೦೯
೩೬. ಅದೇ : ಪು.ಸಂ. ೧೧೩
೩೭. ಅದೇ : ಪು.ಸಂ. ೧೨೭
೩೮. ಅದೇ : ಪು.ಸಂ. ೧೨೯
೩೯. ಅದೇ : ಪು.ಸಂ. ೧೩೩
೪೦. ಚಾಮರಸನ ಪ್ರಭುಲಿಂಗಲೀಲೆ : ಎಸ್. ವಿದ್ಯಾಶಂಕರ : ಪು.ಸಂ. ೧೩೫
೪೧. ಅದೇ : ಪು.ಸಂ. ೧೩೫
೪೨. ಅದೇ : ಪು.ಸಂ. ೧೪೦
೪೩. ಅದೇ : ಪು.ಸಂ. ೧೪೩
೪೪. ಅದೇ : ಪು.ಸಂ. ೧೬೭
೪೫. ಅದೇ : ಪು.ಸಂ. ೧೬೧
೪೬. ಚಾಮರಸನ ಪ್ರಭುಲಿಂಗಲೀಲೆ : ಎಸ್. ವಿದ್ಯಾಶಂಕರ : ಪು.ಸಂ. ೧೬೪
೪೭. ಅದೇ : ಪು.ಸಂ. ೧೬೫
೪೮. ಅದೇ : ಪು.ಸಂ. ೧೬೮
೪೯. ಅದೇ : ಪು.ಸಂ. ೧೭೩
೫೦. ಚಾಮರಸನ ಪ್ರಭುಲಿಂಗಲೀಲೆ : ಎಸ್. ವಿದ್ಯಾಶಂಕರ : ಪು.ಸಂ. ೧೭೫
೫೧. ಅದೇ : ಪು.ಸಂ. ೧೮೩
೫೨ ಅದೇ : ಪು.ಸಂ. ೧೯೦
೫೩. ಅದೇ : ಪು.ಸಂ. ೧೯೧
೫೪. ಅದೇ : ಪು.ಸಂ. ೧೯೪
೫೫. ಚಾಮರಸನ ಪ್ರಭುಲಿಂಗಲೀಲೆ : ಎಸ್. ವಿದ್ಯಾಶಂಕರ : ಪು.ಸಂ. ೨೦೭
೫೬. ಅದೇ : ಪು.ಸಂ. ೨೦೭
೫೭. ಅದೇ : ಪು.ಸಂ. ೨೦೮
೫೮. ಅದೇ : ಪು.ಸಂ. ೨೧೧
೫೯. ಅದೇ : ಪು.ಸಂ. ೨೧೪
೬೦. ಅದೇ : ಪು.ಸಂ. ೨೨೦
೬೧. ಚಾಮರಸನ ಪ್ರಭುಲಿಂಗಲೀಲೆ : ಎಸ್. ವಿದ್ಯಾಶಂಕರ : ಪು.ಸಂ. ೨೨೫
೬೨. ಅದೇ : ಪು.ಸಂ. ೨೬೩
೬೩. ಅದೇ : ಪು.ಸಂ. ೨೬೪
೬೪. ಅದೇ : ಪು.ಸಂ. ೨೬೭

ಅಧ್ಯಾಯ - ೪

# ತೌಲನಿಕ ಅಧ್ಯಯನ

## ಅ) ಎರಡು ಕೃತಿಗಳ ಕಥಾವಸ್ತು ಮತ್ತು ವಿನ್ಯಾಸ :

ಹರಿಹರ ಕವಿಯ 'ಪ್ರಭುದೇವರ ರಗಳೆ'ಯು ಅಲ್ಲಮಪ್ರಭುವನ್ನು ಕುರಿತಂತೆ ಕನ್ನಡದಲ್ಲಿ ರಚನೆಯಾದ ಮೊದಲಕೃತಿ. ಅಲ್ಲಮನನ್ನು ಕುರಿತು ರಚನೆಯಾಗಿರುವ ಎಲ್ಲಾ ಕೃತಿಗಳಿಗೆ ಹೋಲಿಸಿದರೆ ಅತ್ಯಂತ ಚಿಕ್ಕ ಕೃತಿ ಎನ್ನಬಹುದು. ಕೇವಲ ಹದಿನೆಂಟು ಪುಟಗಳಷ್ಟು ಇರುವ ಒಂದೇ ಒಂದು ಸ್ಥಲದಲ್ಲಿ ನಿರೂಪಣೆಗೊಂಡಿದೆ. ಚಾಮರಸನ 'ಪ್ರಭುಲಿಂಗಲೀಲೆ' ಈ ಕೃತಿಗೆ ಹೋಲಿಸಿದರೆ ದೊಡ್ಡ ಪ್ರಮಾಣದ ಕೃತಿಯೇ ಆಗಿದೆ. ಸುಮಾರು 25 ಗತಿಗಳಲ್ಲಿ 1111 ಪದ್ಯಗಳ ಸುದೀರ್ಘವಾದ ಹರುಹನ್ನು ಹೊಂದಿದೆ. ಪ್ರಭುದೇವರ ರಗಳೆ ಹೆಸರೆ ಸೂಚಿಸುವಂತೆ 'ರಗಳೆ' ಪ್ರಕಾರದಲ್ಲಿದೆ. ಒಂದೇ ಸ್ಥಲದಲ್ಲಿ ರಚನೆಯಾಗಿದ್ದರೂ ಅಲ್ಲಮನ ಅಸಾಧಾರಣ ಬದುಕಿನ ವಿವರಗಳನ್ನೊಳಗೊಂಡ ಅನಾವರಣದ ಚಿತ್ರಣವಿದೆ. ಅಂತೆಯೇ ವೀರಶೈವ ಪುರಾಣಗಳಲ್ಲಿ ಪ್ರಭುಲಿಂಗಲೀಲೆಯು ಉಜ್ವಲವಾದ ಕೃತಿ ಎನ್ನುವುದರಲ್ಲಿ ಅನುಮಾನವಿಲ್ಲ.

ಹರಿಹರನು ತನ್ನ 'ಪ್ರಭುದೇವರ ರಗಳೆ'ಯಲ್ಲಿ ಅಲ್ಲಮನ ಕಥೆಯನ್ನು ಎರಡುಭಾಗಗಳಲ್ಲಿ ವಿಂಗಡಿಸಿಕೊಂಡು ನಿರೂಪಿಸಿರುತ್ತಾನೆ. ಅಲ್ಲಮನ ಹುಟ್ಟಿನಿಂದ ಕಾಮಲತೆಯ ಸಾವಿನವರೆಗಿನ ಕಥೆ ಒಂದು ಭಾಗ. ಮತ್ತೊಂದು ಕಾಮಲತೆಯ ಸಾವಿನಿಂದ ಕೈಲಾಸ ಪದವಿಯನ್ನು ಪಡೆಯುವ ತನಕ. ಪ್ರಭುಲಿಂಗಲೀಲೆಯಲ್ಲಿ ಅಲ್ಲಮ ಪ್ರಭುವಿನ ಚರಿತ್ರೆ ಮತ್ತು ಅಲ್ಲಮ ಪ್ರಭುವಿನ ಸಂಪ್ರದಾಯದ ಸನ್ಮಾರ್ಗವಾದ ವೀರಶೈವ ಧರ್ಮಗಳ ಸುದೀರ್ಘವಾದ ನಿರೂಪಣೆ ಸಾಗುತ್ತದೆ. ಈ ಕೃತಿಯಲ್ಲಿ ಕಾವ್ಯ ಧರ್ಮ ಮತ್ತು ಧರ್ಮದ ಧೋರಣೆಗಳು ನಿಚ್ಚಳವಾಗಿ ನೆಲೆನಿಂತಿವೆ. ಅಲ್ಲಮನ ಹುಟ್ಟನ್ನು ಕುರಿತು ಹರಿಹರ ಶಾಪದರೂಪವನ್ನು ಕೊಟ್ಟಿದ್ದಾನೆ. ಕೈಲಾಸದಲ್ಲಿ ನಿರ್ಮಾಯನೆಂಬ ಗಣನಿದ್ದನು. ಒಮ್ಮೆ ಆತ ಕೈಲಾಸದಲ್ಲಿ ಸುರಸತಿಯೊಬ್ಬಳನ್ನು ಆಸೆಯಿಂದ ನೋಡಿದನು. ಇದನ್ನು ಕಂಡ ಶಿವನು ನಿರ್ಮಾಯ ಮತ್ತು ಸುರಸತಿಯನ್ನು ಭೂಲೋಕಕ್ಕೆ ಕಳುಹಿಸುತ್ತಾನೆ. ಸಾಮಾನ್ಯರಂತೆ ಭೂಮಿಯಲ್ಲಿ ಆ ನಿರ್ಮಾಯ ಮತ್ತು ಸುರಸತಿಯರಿಬ್ಬರೂ ಹುಟ್ಟುತ್ತಾರೆ. ಹರಿಹರನು ಹೇಳಿರುವಂತೆ ಪ್ರಭುದೇವನು ಶಾಪ ಪ್ರಸಂಗದಿಂದ ಮರ್ತ್ಯದಲ್ಲಿ ಮಾನವನಾಗಿ ಅವತಾರವೆತ್ತಿದನೆಂದು ಹೇಳುವುದನ್ನು ಶೂನ್ಯಸಂಪಾದನೆಕಾರರು ಒಪ್ಪುವುದಿಲ್ಲ.

ಭೂಲೋಕದಲ್ಲಿ ಇರುವ 'ಬೆಳ್ಳಿಗಾವೆ'ಯೆಂಬ ಪುರದಲ್ಲಿ ಮಲ್ಲಿಕಾಪುರದ ನಾಗವಾಸಾಧಿಪತಿಯ ಮಗನಾಗಿ, 'ಅಲ್ಲಯ್ಯ'ನೆಂಬ ಹೆಸರನ್ನು ಹೊತ್ತು ನಿರ್ಮಾಯ ಜನಿಸುತ್ತಾನೆ. ಸುರಸತಿ ಅದೇ ಪುರದ ಧನದತ್ತನ ಸತಿಯ ಬಸುರಲ್ಲಿ ಕಾಮಲತೆ ಎಂಬ ಅಭಿದಾನವನ್ನು ಹೊತ್ತು ಜನಿಸುತ್ತಾಳೆ. ಮಹಾವ್ಯಕ್ತಿಗಳ ಹುಟ್ಟಿಗೆ ಈ ಬಗೆಯ ಅಲೌಕಿಕ ಹಿನ್ನೆಲೆಯನ್ನು ಕಲ್ಪಿಸುವುದು ಸಾಮಾನ್ಯವಾಗಿ ಹಿಂದಿನವರ ವಿಧಾನ. ಹರಿಹರನು ಮಾಡುವುದು ಈ ಕೆಲಸವನ್ನೇ. ಪುರಾಣ ಸತ್ಯವನ್ನು ಲೌಕಿಕ ಒರೆಗಲ್ಲಿಗೆ ಹಚ್ಚದೆ ಅದರ ಸಾಂಕೇತಿಕ ಅರ್ಥವನ್ನು ಮಾತ್ರ ಅಂಗೀಕರಿಸಬೇಕು. ಇಲ್ಲದಿದ್ದರೆ ಪ್ರಭುಲಿಂಗ ಲೀಲೆ ಮಾತ್ರವಲ್ಲ, ರಾಮಾಯಣ, ಮಹಾಭಾರತಗಳು ಮತ್ತು ಪಾಶ್ಚಾತ್ಯ ಪ್ರಾಚೀನ ಕಾವ್ಯಗಳು ಸಹ ಅರ್ಥಹೀನವಾಗುತ್ತವೆ [1] ಎನ್ನುವ ಮಾತುಗಳು ಸಮಂಜಸವೆನಿಸುತ್ತದೆ.

---

ಹರಿಹರನ ರಗಳೆಯಂತೆಯೇ ಪ್ರಭುಲಿಂಗಲೀಲೆಯಲ್ಲಿಯೂ ನಾಯಕ ವ್ಯಕ್ತಿ ಪ್ರಭುದೇವನೇ ವೀರಶೈವ ಮತದಲ್ಲಿ ಅಗ್ರಗಣ್ಯ. ಜನ್ಮತಃ ಮರ್ತ್ಯ ವ್ಯಕ್ತಿಗಳು ತಮ್ಮ ಸಾಧನೆಯಿಂದ ಮಹಾತ್ಮ ಪದವಿಗೇರಿದವರು. ಪ್ರಭುಲಿಂಗಲೀಲೆಯಲ್ಲಿ ಭೋಗವನ್ನು ಬಿಟ್ಟು ಯೋಗವನ್ನು ಚಿತ್ರಿಸಲಾಗಿದೆ. ಕೈಲಾಸದಲ್ಲಿ ಒಮ್ಮೆ ಶಿವ ಪಾರ್ವತಿಯರು ತಮ್ಮ ಪರಿವಾರ ಸಹಿತ ಒಡ್ಡೋಲಗದಲ್ಲಿರಲು, ಪಾರ್ವತಿ ಪತಿಯನ್ನು ಕುರಿತು ಪ್ರಶ್ನಿಸುತ್ತಾಳೆ. ಶಿವನೆ ನಿನ್ನ ಒಡ್ಡೋಲಗದಲ್ಲಿರುವ ಘನ ಮಹಿಮರೆಲ್ಲರೂ ಭವಕ್ಕೆ ಬಾರದೆ ನಿತ್ಯ ಸುಖದಿಂದುರುವರೋ ಅಥವಾ ಇವರಿಗೂ ನೆಲೆಯಿಲ್ಲವೋ ಇವರ ಅವಸ್ಥೆಯನ್ನು ಹೇಳು ಎಂದು ಕೇಳುತ್ತಾಳೆ.

ಶಿವನೆ ನಿನ್ನೊಡ್ಡೋಲಗದೊಳೊ
ಪ್ಪುವ ಮಹಾಘನಮಹಿಮರೆಲ್ಲರು
ಭವಕೆ ಬಾರದೆ ನಿತ್ಯಸುಖದಿಂದಿಪ್ಪರೋ ಮೇಣು
ಇವರಿಗೆಯು ನೆಲೆಯಿಲ್ಲವೋ ಪೇ
ಳಿವರವಸ್ಥೆಯನೆನುತ ಕೇಳಲು
ಶಿವೆಗೆ ತಿಳಿವಂದದಲಿ ಬಳಿಕಾ ಶಂಭುವಿಂತೆಂದ [೨]

ಗಿರಿಜೆಯಹುದೌ ನಿನ್ನ ಬುದ್ಧಿಯ
ಪರಿಯದೊಳ್ಳಿಹ ಪ್ರಶ್ನೆಯಾಯಿತು
ಹರಿವಿರಂಚಿಗಳಾದಿಯಾದವರಾದೊಡೆಯು ತುದಿಗೆ
ವಿರಚಿಸುತ್ತಿಹ ನಾಮರೂಪಗ
ಳೊರೆದ ಸತ್ಕ್ರಿಯೆಯಿದ್ದುವಾದೊಡೆ
ದೊರಕಲಱಿಯದು ನಿತ್ಯ ಸುಖವಗಜಾತೆ ಕೇಳೆಂದ [೩]

ಪಾರ್ವತಿಗೆ ಅರ್ಥವಾಗುವಂತೆ ಬಳಿಕ ಆ ಶಿವ ಹೀಗೆನ್ನುತ್ತಾನೆ, ಆಗ ಶಿವನು ನಾಮ ರೂಪಕ್ರಿಯೆಗಳನ್ನು ಗೆಲ್ಲಬಲ್ಲವರ್ಗೆ ಮಾತ್ರ ನಿತ್ಯಸುಖವೆಂದೂ ಉಳಿದವರು ಭೂಮಿಯಲ್ಲಿ ಜನಿಸಿ ಸಾಧನೆ ಮಾಡಿ ಸತ್ಯವನ್ನರಿಯ ಬೇಕು ಎಂದು ತಿಳಿಸುತ್ತಾನೆ. ಇದನ್ನು ಭೂಮಿಯಲ್ಲಿ ಬೋಧಿಸುವವರು ಯಾರು? ಎಂದು ಪ್ರಶ್ನಿಸಿದಾಗ ಅಲ್ಲಮಪ್ರಭುವಿನ ಹೆಸರನ್ನು ಸೂಚಿಸಿದ. ಪಾರ್ವತಿ ಅಲ್ಲಮನನ್ನು ಬಹು ಸುಲಭನೆಂದಳು. ಆಗ ಶಂಕರನು ಆತ ಅನುಪಮನೆಂದೂ, ಅಸಾಧ್ಯನೆಂದೂ ಹೇಳಿ ತನ್ನ ಅಂಶದಿಂದಲೇ ಜನಿಸಿದನೆಂಬ ಸಂಗತಿಯನ್ನು ತಿಳಿಸಿದ. ಆದರೆ ಪಾರ್ವತಿಮಾತ್ರ ಹಟತೊಟ್ಟು ಅಲ್ಲಮನನ್ನು ವಶಪಡಿಸಿಕೊಂಡು ಬರಲು ತನ್ನ ತಾಮಸ ಕಳೆಗೆ ಅಪ್ಪಣೆಕೊಟ್ಟು ಭೂಮಿಗೆ ಕಳುಹಿಸಿದಳು. ಪ್ರಭುಲಿಂಗ ಲೀಲೆಯಲ್ಲಿ ಭೋಗವನ್ನು ಬಿಟ್ಟು ಯೋಗವನ್ನು ಮಾತ್ರ ಚಿತ್ರಿಸಲಾಗಿದೆ. ಕಾವ್ಯದಲ್ಲಿ ಮಾಯಾದೇವಿಯ ನೃತ್ಯದಿಂದ ಪ್ರಭುದೇವ ಯೋಗದಿಂದ ಭೋಗಕ್ಕೆ ತಿರುಗಲಿಲ್ಲ. ಇದು ಈ ಕೃತಿಯ ಮುಖ್ಯಸನ್ನಿವೇಶವೆನ್ನಬಹುದು. ಸಾಮಾನ್ಯ ಮಾನವ ದೇವಮಾನವನಾದ ಸಿದ್ಧಿಯ ಹಂತಗಳನ್ನು ಹರಿಹರ ಚಿತ್ರಿಸಹೊರಟರೆ ಅದಕ್ಕೆ ತದ್ವಿರುದ್ಧವಾಗಿ ದೇವನೇ ಅಲ್ಲಮ ಪ್ರಭುವೆಂಬ ಹೆಸರಿನಲ್ಲಿ ನಡೆಸಿದ ಲೀಲೆಗಳನ್ನು ಚಾಮರಸ ಚಿತ್ರಿಸಹೊರಟಿರುವನು [೪] ಎನ್ನುವ ಮಾತು ಒಪ್ಪಿಗೆಯಾಗುತ್ತದೆ.

---

ಹರಿಹರನ ಪ್ರಭುದೇವರರಗಳೆಯಲ್ಲಿ ಕಥೆ ಹೀಗಿದೆ :

ಬಾಲ್ಯ ಸಡಿಲಿಸುತ್ತಿದ್ದಂತೆಯೇ ಅಲ್ಲಮ ಮೃದಂಗ ವಿದ್ಯೆಯಲ್ಲಿ ಪರಿಣತನಾಗುತ್ತಾನೆ. ದಿನವೂ ಗುಹೇಶ್ವರನ ದೇವಾಲಯಕ್ಕೆ ಹೋಗಿ ಮೃದಂಗ ಬಾರಿಸುತ್ತಾನೆ. ಒಮ್ಮೆ ಕಾಮಲತೆ "ಸುವಿಟರಮೇಲೆ ಥಾಳಿ ಪೊರಮಡುವಂತೆ" ಆ ದೇವಾಲಯಕ್ಕೆ ಬರುತ್ತಾಳೆ. ಅಲ್ಲಿ ಅಲ್ಲಮ ಮತ್ತು ಕಾಮಲತೆಯರಲ್ಲಿ ಪ್ರೇಮ ಅಂಕುರಿಸುತ್ತದೆ. ಆಗ ಇಬ್ಬರಲ್ಲೂ ಪ್ರೇಮಾಂಕುರವಾಗಿರುವುದು ಸಖಿಯರಿಗೆ ತಿಳುಯುತ್ತದೆ. ಆಗ ಸಖಿಯರು, ಅವರಿಬ್ಬರನ್ನು ಸಜ್ಜೆ ಮನೆಯಲ್ಲಿ ಸೇರಿಸುತ್ತಾರೆ. ಪ್ರೀತಿ ಬೆಸಗೆಯಲ್ಲಿ ಅಲ್ಲಮ, ಕಾಮಲತೆಯರು ಹಲಕೆಲವು ವತ್ಸರಗಳನ್ನು ಕೆಲವೇ ನಿಮಿಷಗಳಂತೆ ಕಳೆಯುತ್ತಾರೆ. ಅಷ್ಟರಲ್ಲಿಯೇ ಕಾಮಲತೆಗೆ ಮಹಾಜ್ವರ ಬಂದೆರಗುತ್ತದೆ. ನಂತರ ಕಾಮಲತೆ ಸಾಯುತ್ತಾಳೆ, ಇಲ್ಲಿಯವರೆಗೆ ಕಥೆ ಬಹಳ ಅವಸರದಿಂದ ಸಾಗುತ್ತದೆ. ಈ ಭಾಗದಲ್ಲಿ ಅಲ್ಲಮನ ಬದುಕಿನ ಹಲವಾರು ಘಟನೆಗಳು ಬರುತ್ತವೆ. ಅಲ್ಲಮ ನಾಗವಾಸಾಧಿಪತಿಯ ಸತಿಯ ಬಸುರಲ್ಲಿ ಹುಟ್ಟುತ್ತಾನೆ. ಬಾಲ್ಯ ಕಳೆದು ಯೌವನಕ್ಕೆ ಬರುತ್ತಾನೆ. ಮೃದಂಗ ವಿದ್ಯೆಯನ್ನು ಕಲಿಯುತ್ತಾನೆ.

ಧನದತ್ತನ ಸತಿಯ ಬಸುರಲ್ಲಿ ಕಾಮಲತೆ ಹುಟ್ಟುತ್ತಾಳೆ. ಬೆಳೆದು ಯೌವನಕ್ಕೆ ಬರುತ್ತಾಳೆ. ಅಲ್ಲಮ ಕಾಮಲತೆಯರು ಪರಸ್ಪರ ಪ್ರೇಮಿಸುತ್ತಾರೆ. ಹೀಗೆ ಹಲವು ಘಟನೆಗಳು ಜರುಗುತ್ತವೆ. ಆದರೆ ಯಾವ ಘಟನೆಯನ್ನು ಕವಿ ವಿಸ್ತಾರವಾಗಿ ಹೇಳುವ ಪ್ರಯತ್ನವನ್ನೇ ಮಾಡುವುದಿಲ್ಲ. ಒಂದೆರಡು ಸಾಲುಗಳಲ್ಲಿಯೇ ಎಲ್ಲವನ್ನು ಮುಗಿಸಿ ಬಿಡುತ್ತಾನೆ. ಪ್ರಭುಲಿಂಗ ಲೀಲೆಯಲ್ಲಿ ಪ್ರಭುವಿನ ಎಡಬಲಕ್ಕೆ ಬರಬೇಕಾದ ಮಾಯೆ, ಮಹಾದೇವಿಯರ ಕಥೆಯೊಂದಿಗೆ ಬಸವ, ಸಿದ್ದರಾಮ, ಮುಕ್ತಾಯಿ, ಮರುಳುಶಂಕರದೇವ ಮೊದಲಾದವರ ಉಪಕಥೆಗಳೂ ಬಂದಿವೆ. ಪ್ರಭುಲಿಂಗ ಲೀಲೆಯಲ್ಲಿ ಮಾಯಾ ಕೋಲಾಹಲ ಪ್ರಸಂಗ ಮೊದಲಿನ ಏಳುಗತಿಗಳು ಒಂದು ಭಾಗ, ಬಸವಾದಿ ಪ್ರಮಥರೋದ್ಧಾರದ ಗತಿಗಳು, ಇನ್ನೊಂದು ಭಾಗ. ಅಖಂಡ ಕಥೆ ಪೂರ್ವಭಾಗದಲ್ಲಿ, ಖಂಡ ಕಥೆಗಳು ಉತ್ತರ ಭಾಗದಲ್ಲಿ ಬಂದಿದೆ. ಅಲ್ಲಮ ಪ್ರಭು ಜನ್ಮತಃ ಯೋಗಿಯೆನ್ನುವುದಕ್ಕಿಂತ ಭೋಗದಿಂದ ಯೋಗಕ್ಕೆ ತಿರುಗಿದ ವೈರಾಗ್ಯ ಮೂರ್ತಿಯೆಂದು ಭಾವಿಸುವುದು ಹೆಚ್ಚು ಸಮಂಜಸ. ಪ್ರಭುದೇವರ ರಗಳೆಯಲ್ಲಿ ಈ ದೃಷ್ಟಿಯ ನಿರೂಪಣೆ ಇದೆ. ಅಲ್ಲಿರುವ ಹುಟ್ಟಿಗೆ ಯಾವುದೋ ಶಾಪದ ಕಾರಣ ನೀಡುತ್ತಾನೆ. ತಂದೆ ತಾಯಿಯರ ವಿಚಾರವಂತು ಇಲ್ಲವೇ ಇಲ್ಲ ಎನ್ನುವಂತಿದೆ. ಅಲ್ಲಿರುವ ಬಾಲ್ಯವನ್ನು ಹರಿಹರ ವಿವರವಾಗಿ ಹೇಳುವ ಪ್ರಯತ್ನಮಾಡಿಲ್ಲ. ಕೇವಲ ಮೂರ್ನಾಲ್ಕು ಸಾಲುಗಳಲ್ಲಿಯೇ ಅವನ ಬಾಲ್ಯದ ದಿನಗಳನ್ನು ವರ್ಣಿಸಿ ಬಿಟ್ಟಿದ್ದಾನೆ. ಧರ್ಮ ನಿರೂಪಣೆಯೇ ಎರಡು ಕೃತಿಗಳಲ್ಲಿ ಪ್ರಧಾನ ಪಾತ್ರವಹಿಸುತ್ತವೆ. ಚಾಮರಸ ತನ್ನ ಕೃತಿಯಲ್ಲಿ ಇಷ್ಟಲಿಂಗದ ಗತಿ, ಸಾಧಕಾಂಗದ ಗತಿ, ಮುನಿಗಳಿಗೆ ಬೋಧಿಸಿದ ಗತಿ, ಮನೋಲಯದಗತಿಗಳ ಮೂಲಕ ನೇರವಾಗಿ, ಮರುಳುಶಂಕರದೇವರ ಗತಿ (ಪ್ರಸಾದಕತ್ವ), ಮಹಾದೇವಿಯಕ್ಕನಗತಿ (ಶರಣಸತಿ–ಲಿಂಗ ಪತಿತತ್ವ) ಇತ್ಯಾದಿಗಳ ಮೂಲಕ ವ್ಯಂಜಕವಾಗಿ, ಮಿಕ್ಕಗತಿಗಳಲ್ಲಿ ಆನುಷಂಗಿಕವಾಗಿ ವಿವರಿಸುತ್ತ ಕಾವ್ಯ ಪಥದಲ್ಲಿ ಮುನ್ನಡೆದಿದ್ದಾನೆ.

ಎರಡು ಕಾವ್ಯಗಳಲ್ಲಿಯೂ ಧರ್ಮ ಪ್ರಮುಖ ಅಂಶವಾಗಿ ಅವಶ್ಯವೆನಿಸಿದಷ್ಟು ಸಮರ್ಪಕವಾಗಿ ಹರಿದು ಬಂದಿದೆ. ಚಾಮರಸನು ಕಾವ್ಯದ ಆಳಕ್ಕೆ ಇಳಿದು ಗುಹೇಶ್ವರನ ದರ್ಶನ ಮಾಡಿಸಿದ್ದಾನೆ. ಪ್ರಭುಲಿಂಗಲೀಲೆ ಇಡಿಯಾಗಿ ಅನುಭವ ಶೀಲ ಕಾವ್ಯವಾಗಿದೆ. ಪ್ರತಿ ಸಂದರ್ಭ

ಸನ್ನಿವೇಶಗಳು ಆಂತರ್ಯಕ್ಕೆ ಮುಟ್ಟುತ್ತವೆ. ಕಥಾ ನಿರೂಪಣೆಯಲ್ಲಿಯೂ ಕಾವ್ಯತತ್ವ ಕಳಚಿ ಹೋಗದಂತೆ ನೋಡಿಕೊಂಡಿದ್ದಾನೆ. ಹೀಗಾಗಿ ಕಾವ್ಯದಲ್ಲೆಲ್ಲ ಚಾಮರಸನ ಪ್ರಾಮಾಣಿಕತೆ ತುಂಬಿ ನಿಂತಿದೆ. ಹರಿಹರ ತಿಳಿಸುವಂತೆ ಅಲ್ಲಮ ಒಬ್ಬ ನಾಗವಾಸಾಧಿಪತಿಯ ಮಗ, ಮದ್ದಳೆ ಬಾರಿಸುವವನು, ಕಾಮಲತೆಯಾದರೊ ಧನದತ್ತನೆಂಬುವನ ಮಗಳು. ಇಬ್ಬರ ಅಂತಸ್ತುಗಳು ಭಿನ್ನವಾಗಿದೆ. ಕಾಮಲತೆ–ಅಲ್ಲಮನಿಗಿಂತಲೂ ಸುಸ್ಥಿತಿಯಲ್ಲಿ ಬದುಕಿರುವವಳು. ಆದರೆ ಗುಹೇಶ್ವರ ದೇವಾಲಯದಲ್ಲಿ ಪರಸ್ಪರ ಅನುರಾಗಕ್ಕೆ ಒಳಗಾಗುತ್ತಾರೆ. ಕೂಡಲೇ ಸಖಿಯರೆಲ್ಲರು ಸೇರಿ ಅಲ್ಲಮ–ಕಾಮಲತೆಯರನ್ನು ಸಜ್ಜೆಮನೆಗೆ ಸೇರಿಸುತ್ತಾರೆ. ಅಲ್ಲಿ ಅಲ್ಲಮ–ಕಾಮಲತೆಯರ ಪ್ರಣಯ ಜೀವನ ಪ್ರಾರಂಭವಾಗುತ್ತದೆ. ಹರಿಹರ ಈ ಸಂದರ್ಭವನ್ನು ಸಹಜವಾಗಿ ಮತ್ತು ಸುಂದರವಾಗಿ ನಿರೂಪಿಸಿದ್ದಾನೆ.

ಚಾಮರಸ ಕವಿಯ 'ಪ್ರಭುಲಿಂಗಲೀಲೆ'ಯಲ್ಲಿ ಪಾರ್ವತಿಯ ತಾಮಸ ಕಳೆಯಾದ ಮಾಯೆಯು ಬೆಳುವಲದ ದೇಶದ ಬನವಾಸೆಯೆಂಬ ಪಟ್ಟಣದ ಅರಸನಾದ ಮಮಕಾರ ಮತ್ತು ಆತನ ಮಡದಿಯಾದ ಮೋಹಿನಿದೇವಿಯವರಿಗೆ ಮಗಳಾಗಿ ಹುಟ್ಟಿದಳು. ಆಕೆ ಹುಟ್ಟಿದೊಡನೆಯೇ ಲೋಕದಲ್ಲಿ ಋಷಿ ಮುನಿಗಳೇ ಮುಂತಾದವರ ಸಂಯಮವು ಕಟ್ಟೆಹೊಡೆಯುತ್ತದೆ. ಮನಸ್ಸು ಚಂಚಲವಾಗುತ್ತದೆ. ಈ ಭಾಗ ಕಾವ್ಯದಲ್ಲಿ ಉತ್ತಮವಾಗಿ ಮೂಡಿಬಂದಿದೆ. ಹರಿಹರನಲ್ಲಿ ಇವು ಯಾವುದೇ ರೀತಿಯಲ್ಲಿಯೂ ಪ್ರಕಟವಾಗುವುದಿಲ್ಲ. ಮಾಯೆಯು ಬಾಲ್ಯವನ್ನು ದಾಟಿ ಯೌವನಕ್ಕೆ ಕಾಲಿರಿಸಿದಾಗ ಮಗಳಿಗೆ ಅನುರೂಪನಾದ ವರನನ್ನು ನೋಡುವ ಬಗ್ಗೆ ತಂದೆ ಯೋಚಿಸುತ್ತಿರುವಾಗಲೇ ಕುಲಗುರುವಾದ ಅಹಂಕಾರಾಚಾರ್ಯನ ಆಗಮನವಾಯಿತು. ಹುಡುಗಿಯನ್ನು ನೋಡಿದೊಡನೆಯೇ ಈಕೆ  ಕಾರಣಕನ್ಯೆಯೆಂದು ಗುರು ನಿಶ್ಚಯಿಸಿದರು. ಶಿವನೆ ಈಕೆಗೆ ಗಂಡನಾಗಲು ಅರ್ಹರೆಂದರು. ಮಾಯದೇವಿಯೂ ಮಧುಕೇಶ್ವರನನ್ನು ಬೇಡಿ ಭಕ್ತಿಯಿಂದ ಅರ್ಚಿಸುತ್ತಾಳೆ.ಮಾಯೆ ಶಿವನನ್ನು ಕಾಮ ಮುಖ್ಯವಾಗಿಟ್ಟು ಭಕ್ತಿಯನ್ನು ಮಾಡಿದ ಕಾರಣ, ಅವಳ ಇಷ್ಟವನ್ನು ಈಡೇರಿಸುವ ಸಲುವಾಗಿಯೇ ಅಲ್ಲಮಪ್ರಭು 'ಅಭಿನವ ಕಾಮರೂಪ'ವನ್ನು ತಾಳುತ್ತಾನೆ.

ಕಂಗಳಲಿನೆರೆ ನೋಡಿದಡೆ ಹೆರ
ಹಿಂಗಬಾರದು ಚೆಲುವ ಮುಖದ

ಇದು ಚಾಮರಸನ ವರ್ಣನೆ.

ಹರಿಹರನ ರಗಳೆಯಲ್ಲಿ ಈ ಪ್ರಸಂಗಬರುವುದಿಲ್ಲ. ಕೈಲಾಸದಲ್ಲಿ ಮಾಯೆಯ ಸಮಾಚಾರ ತಿಳಿದ ಗಿರಿಜೆ ವಿಮಳೆಯನ್ನು ಭೂಮಿಗೆ ಕಳುಹಿಸಿದಳು. ಆಕೆ ಬಂದು ಮಾಯೆಯನ್ನು ಎಚ್ಚರಿಸಿದಾಗಲೇ ಅವಳಿಗೆ ತನ್ನ ಪೂರ್ವದ ಕಥೆಗೊತ್ತಾದದ್ದು. ಅಲ್ಲಮ ಮತ್ತು ಕಾಮಲತೆಯರ ನಡುವೆ ಪ್ರಣಯ ಜೀವನ ಪ್ರಾರಂಭವಾದದ್ದು ಸಹಜವಾಗಿಯೇ ಇದೆ. ಅಲ್ಲಮ, ಕಾಮಲತೆಯರ ಪ್ರಣಯ ಜೀವನವನ್ನು ನಿರೂಪಿಸುವ ಚರಿತ್ರೆಯ ಪೂರ್ವಭಾಗ ತಕ್ಕಮಟ್ಟಿಗೆ ವಿಸ್ತೃತವಾಗಿದೆ ಹಾಗೂ ರಸಪೂರ್ಣವಾಗ್ಯೂ ಮೂಡಿಬಂದಿದೆ. ಆದರೆ ಆತನ ಮಹಿಮಾನ್ವಿತ ವ್ಯಕ್ತಿತ್ವವನ್ನು ಕಂಡು ನಿಲ್ಲಿಸಬೇಕಾಗಿದ್ದ ಉತ್ತರಾರ್ಧವು ತೀರ ಸಂಕ್ಷಿಪ್ತವಾಗಿದೆ. ಕಥೆಯು ಆರಂಭದಿಂದ ಅಂತ್ಯದವರೆಗೂ ಆತ್ಯವಸರವಾಗಿಯೇ ಸಾಗುತ್ತದೆ. ಚಾಮರಸ ಕವಿಯಲ್ಲಿ ಬಂದಿರುವ ಕೆಲವು

ಮುಖ್ಯ ಸನ್ನಿವೇಶಗಳು ಹರಿಹರನಲ್ಲಿ ಇಲ್ಲ. ಅನುಭವಮಂಟಪ, ಶೂನ್ಯ ಸಿಂಹಾಸನಾರೋಹಣಾಧಿ ಸಂಗತಿಗಳು ಇಲ್ಲಿ ಬರುವುದೇ ಇಲ್ಲ. ಬಸವಣ್ಣ ಮತ್ತು ಸಿದ್ಧರಾಮರೊಡನೆ ನಡೆದ ಆತನ ಸಂದರ್ಶನವನ್ನು ಕೇವಲ ಐದು ಪಂಕ್ತಿಗಳಲ್ಲಿ ಹೇಳಿ ಮುಗಿಸಿದ್ದಾನೆ.

ಬರುತೆ ಬಸವಣ್ಣನಂ ಕಂಡು ಮಾತಾಡುತಂ
ಹರನ ನಿಲವಿನ ಪರಿಯನೊಲ್ಮೆಯಿಂ ತೋ ತಂ
ನಡೆತಂದು ಚನ್ನ ಸೊನ್ನಲಿಗೆಯ ಪುರಕೆ ಬಂದು
ಮೃಡಮೂರ್ತಿ ಸಿದ್ಧರಾಮನ ಸಾರ್ಗೆನಡೆತಂದು
ಕಲಿಯುಗಂ ಪೊಲ್ಲೆಂದು ಬುದ್ದಿಯಿಂ ಪೇಳು ತಂ
ಸಲೆ ಗೊಪೆಗೆ ನಡುವುದೆಂದೊಲುಮೆಯಿಂ ತೋಱುತಂ [೫]

ಹಾಗೆಯೇ ಗೊಗ್ಗಯ್ಯ, ಮುಕ್ತಾಯಕ್ಕ, ಗೋರಕ್ಷಕ ಮುಂತಾದ ಸಾಧಕರನ್ನು ಅವನು ಸಂದರ್ಶಿಸಿದ ಉಲ್ಲೇಖ ಕೂಡ ರಗಳೆಯಲ್ಲಿಲ್ಲ. ಪ್ರಭುಲಿಂಗಲೀಲೆ, ಶೂನ್ಯ ಸಂಪಾದನೆಗಳಲ್ಲಿ ಮೈವೆತ್ತುನಿಂತಿರುವ ಅನುಭವಗೋಷ್ಠಿಯ ಸೊಗಸಿನ ಒಂದು ಇಣುಕುನೋಟ ಕೂಡ ಹರಿಹರನ ರಗಳೆಯಲ್ಲಿ ದೊರೆಯುವುದಿಲ್ಲ. ಇವೆಲ್ಲ ಸನ್ನಿವೇಶಗಳು ಚಾಮರಸನಲ್ಲಿ ಸಮೃದ್ಧವಾಗಿ ಮೂಡಿ ನಿಂತಿವೆ.

ಪ್ರಭುಲಿಂಗಲೀಲೆಯಲ್ಲಿ ಉಪಕತೆಗಳು ಒಂದು ಮಾಯಾ ಕೋಲಾಹಲ, ಪ್ರಮಥರೋದ್ಧಾರ ಎಂಬ ಎರಡು ಭಾಗಗಳು ಗೋಚರಿಸುತ್ತಿದ್ದರೂ ಎಲ್ಲ ಉಪಕತೆಗಳು ಒಡಲಿನಲ್ಲಿ ಜಂಗಮಜ್ಯೋತಿ ಕತೆಗೂ ಪ್ರಭುವನ್ನು ಬಿಟ್ಟರೆ ಬೇರೆಗತಿಯಿಲ್ಲ ಎನ್ನುವಷ್ಟರ ಮಟ್ಟಿಗೆ ಈ ನಾಯಕನ ಕಥೆ ಬೆಳೆಯುತ್ತಾ ಹೋಗುತ್ತದೆ. ಚಾಮರಸನಿಗೆ ರಸ ಸನ್ನಿವೇಶದ ಭಾಷೆ ಬೇರೆಯಲ್ಲ, ಮತ ಸನ್ನಿವೇಶದ ಭಾಷೆ ಬೇರೆಯಲ್ಲ. ಎರಡರಲ್ಲಿಯೂ ಕವಿತ್ವ ಸಮ ಪ್ರಮಾಣದಲ್ಲಿ ಮಿಡಿದು ಆತನ ಭಾಷೆಯ ಪ್ರಯೋಗ ಸವ್ಯಸಾಚಿತ್ವ ಬೆರಳು ಕಚ್ಚಿಸುತ್ತದೆ. ವೀರಶೈವದ ಭೋಗ, ಯೋಗಗಳ ಸಾಮರಸ್ಯದಷ್ಟೇ ಸಾರ್ಥಕವಾಗಿ ಅದು ಈ ಉಭಯ ಕ್ಷೇತ್ರಗಲಲ್ಲಿ ಬಳಕೆಗೊಂಡಿದೆ. ಹರಿಹರ ತನ್ನ ರಗಳೆಯಲ್ಲಿ ಕಾಮಲತೆ ಮತ್ತು ಅಲ್ಲಮ ಪ್ರಥಮಬಾರಿಗೆ ಅನುರಾಗಕ್ಕೆ ಒಳಗಾಗುವ ಸನ್ನಿವೇಶವು ಕಥೆಯಲ್ಲಿ ಬಹಳ ಸೊಗಸಾಗಿದೆ. ಹಾಗೆಯೇ ಕವಿ ಅಲ್ಲಮ ಮತ್ತು ಕಾಮಲತೆಯರ ನಡುವಿನ ಪ್ರಣಯವನ್ನು ಸೊಗಸಾಗಿ ನಿರೂಪಿಸಿದ್ದಾನೆ. ಈ ನಿರೂಪಣೆಯಲ್ಲಿ ಕವಿ ಬಹಳಷ್ಟು ಎಚ್ಚರಿಕೆ ವಹಿಸಿದ್ದಾನೆ. ಎರಡನೆಯ ಈ ಭಾಗ ಹಲವು ನ್ಯೂನತೆಯಿಂದ ಕೂಡಿದ್ದರೂ ಕಾವ್ಯ ತನ್ನ ಸೊಗಸನ್ನು ಕಳೆದುಕೊಂಡಿಲ್ಲ. ಅಲ್ಲಮನ ವಿರಹದ ಜೀವನ ಹಾಗೂ ಸಾಧನೆಯನ್ನು ಕವಿ ಮನೋಜ್ಞವಾಗಿ ಚಿತ್ರಿಸಿದ್ದಾನೆ.[೬]

ಪ್ರಭುಲಿಂಗಲೀಲೆ ಒಂದು ರೂಪಕ ಕಾವ್ಯ. ತಾಮಸ ವರ್ಗದ ಮಮಕಾರ-ಮೋಹಿನಿ-ಮಾಯೀ, ಸಾತ್ವಿಕ ವರ್ಗದ ಸುಮತಿನಿರ್ಮಲ-ಮಾಹಾದೇವಿ ಹಾಗೆಯೇ ದೈವೀವರ್ಗದ ನಿರಹಂಕಾರ-ಸುಜ್ಞಾನಿ-ಪ್ರಭುದೇವರ ಚಿತ್ರಣದಿಂದಾಗಿ ಇದು ಕೇವಲ ಕಥೆಯಾಗದೆ, ಒಂದು ಧ್ವನಿಪೂರ್ಣವಾದ ರೂಪಕ ಕಾವ್ಯವಾಗಿ ಮಾರ್ಪಟ್ಟಿದೆ. ಬಹುಶಃ ಕನ್ನಡ ಸಾಹಿತ್ಯದಲ್ಲಿ ಇಂತಹ ಧ್ವನಿಪೂರ್ಣ ಕಾವ್ಯ ಬೇರೊಂದಿಲ್ಲವೆಂಬ ಕೀರ್ತಿಗಳಿಸಿದೆ. ವೀರಶೈವ ಧರ್ಮವನ್ನು ಪುನರುಜ್ಜೀವನ

ಗೊಳಿಸಲು, ಪುನರ್ವಿಮರ್ಶಿಸಲು ನಡೆದ ಪ್ರಗತಿಶೀಲ ಆಂದೋಲನದ ಯುಗದಲ್ಲಿ ಬಾಳಿದ ಚಾಮರಸ ಕವಿಗೆ ಯಾವುದೇ ಒತ್ತಡದ ಪರಿಸ್ಥಿತಿಇರಲಿಲ್ಲ. ಹೀಗಾಗಿ ಸ್ವಾತಂತ್ರ್ಯವಹಿಸಿ ಅನುಭವ ಪ್ರವಚನದ ಒರೆಗಲ್ಲಿನ ಮೇಲೆ ಪ್ರಭುಲಿಂಗಲೀಲೆಯನ್ನು ಒಂದು ಕಲಾಕೃತಿಯನ್ನಾಗಿ ಸೃಷ್ಟಿಸಿದ್ದಾನೆ.

ಹರಿಹರನ ಪ್ರಭುದೇವರ ರಗಳೆಯನ್ನು ಸಮಗ್ರವಾಗಿ ಗಮನಿಸಿದಾಗ ಶಿವನ ಮಹಿಮೆಯನ್ನು ಸಾರುವ ಏಕಮಾತ್ರ ಉದ್ದೇಶದಿಂದ ಹರಿಹರ ಈ ಕಥೆಯನ್ನು ಬರೆದಿರುವಂತೆ ಕಂಡುಬರುತ್ತದೆ. ಅಂತೆಯೇ ಕವಿಯ ಉದ್ದೇಶವು ಸಫಲವೂ ಆಗಿದೆ. ಪ್ರಭುದೇವರ ರಗಳೆಯಲ್ಲಿ ಬರುವ ಈ ಸನ್ನಿವೇಶವು ಚಾಮರಸನ ಪ್ರಭುಲಿಂಗಲೀಲೆಯ ಸನ್ನಿವೇಶಕ್ಕೂ ಅತಿ ಸಾಮ್ಯತೆಯನ್ನು ಗೋಚರಿಸುವುದನ್ನು ಗಮನಿಸಬಹುದು. ಪ್ರಭುದೇವನ ರಗಳೆಯಲ್ಲಿ ಅಲ್ಲಮ ನಾಗವಾಸಾಧಿಪತಿಯ ಬಸುರಲ್ಲಿ ಹುಟ್ಟುತ್ತಾನೆ ಎಂಬುದಾಗಿ ಹೇಳಲಾಗಿದೆ. ಬಾಲ್ಯವನ್ನು ಕಳೆದು ಯೌವ್ವನಕ್ಕೆ ಬರುತ್ತಾರೆ. ಮೃದಂಗ ವಿದ್ಯೆಯನ್ನು ಕಲಿಯುತ್ತಾನೆ. ಇದೇ ರೀತಿಯಲ್ಲಿ ಪ್ರಭುಲಿಂಗ ಲೀಲೆಯಲ್ಲಿಯು ಅಲ್ಲಮ ನಟುವ ಜಾತಿಯಲ್ಲಿ ಜನಿಸಿದ ಎನ್ನುವುದು ಪ್ರಸ್ತಾಪಿತವಾಗಿದೆ. ಇದನ್ನು ಪರಸ್ಪರ ಅವಲೋಕಿಸಬಹುದು. ಇದರಿಂದ ಹರಿಹರ ಚಾಮರಸರ ಕೃತಿಗಳಲ್ಲಿನ ಸನ್ನಿವೇಶಗಳ ನಿರ್ಮಾಣವನ್ನು ಅರ್ಥಮಾಡಿಕೊಳ್ಳಬಹುದು. ರಗಳೆಯಲ್ಲಿ ಅಲ್ಲಮನು ಕಾಮಲತೆಯಲ್ಲಿ ಪ್ರೇಮಕ್ಕೆ ಒಳಗಾಗುತ್ತಾನೆ. ಆದರೆ ಪ್ರಭುಲಿಂಗ ಲೀಲೆಯಲ್ಲಿ ಮಾಯೆಯೇ ಅಲ್ಲಮನ ಮೃದಂಗಕ್ಕೆ ಮನಸೋತು ಅಲ್ಲಮನನ್ನೂ ಪ್ರೇಮಿಸುತ್ತಾಳೆ. ರಗಳೆಯಲ್ಲಿ ಯಾವುದೇ ಘಟನೆಯನ್ನು ಕವಿ ವಿಸ್ತಾರವಾಗಿ ತರುವುದಿಲ್ಲ. ಎಲ್ಲಾ ಅತ್ಯವಸರವಾಗಿ ಕಥೆಯು ಸಾಗುತ್ತದೆ. ಕೇವಲ ಒಂದೆರಡು ಸಾಲುಗಳಲ್ಲಿಯೇ ಮುಗಿಸುತ್ತಾನೆ ಕವಿ. ಆದರೆ ಪ್ರಭುಲೀಲೆಯಲ್ಲಿ ಮಾಯೆ ಅಲ್ಲಮರ ನಡುವಿನ ಸಂವಾದವನ್ನು ಸುದೀರ್ಘವಾಗಿ ಬೆಳೆಸಿರುವುದನ್ನು ಕಾಣಬಹುದು. ನಂತರ ಮಾಯೆಯನ್ನು ಎಚ್ಚರಿಸುವ ಸಲುವಾಗಿ ವಿಮಳೆ ಬರುವುದು. ಈ ಎಲ್ಲಾ ಸನ್ನಿವೇಶಗಳು ರಸಘಟ್ಟಗಳಾಗಿವೆ. ಹೀಗೆ ಒಂದಾದ ಮೇಲೆ ಒಂದರಂತೆ ಸನ್ನಿವೇಶಗಳ ನಿರ್ಮಾಣವು ಕಥಾ ಸರಣಿಯನ್ನೇ ಮುಂದುವರಿಸುವುದು.

ಅಲ್ಲಮನ ಹುಟ್ಟಿಗೆ ಹರಿಹರ ಒಂದು ಸಣ್ಣ ಶಾಪವನ್ನು ಕಾರಣವಾಗಿ ನೀಡುತ್ತಾನೆ. ಹಾಗೆಯೇ ತಂದೆ ತಾಯಿಯರ ವಿಚಾರವನ್ನು ತಿಳಿಸುವುದೇ ಇಲ್ಲ. 'ವಲ್ಲೀಪುರ'ದ ನಾಗವಾಸಾಧಿ ಪವೆಯಪ್ಪ ಸಲ್ಲಲಿತ ನಾಯಕನ ಎಂಬುದಾಗಿ ಹೇಳುತ್ತಾನೆ ಅಷ್ಟೇ. ಅವನ ಹೆಸರನ್ನಾಗಲಿ ಇಡಿ ವೃತ್ತಾವನ್ನಾಗಲಿ ಹೇಳದೆ ಸಂಪೂರ್ಣ ಕೈಬಿಟ್ಟಿದ್ದಾನೆ.

ಆದರೆ ಚಾಮರಸನ 'ಪ್ರಭುಲಿಂಗಲೀಲೆ'ಯಲ್ಲಿ ಅಲ್ಲಮನ ಸುದೀರ್ಘ ವ್ಯಕ್ತಿ ಪರಿಚಯ ತಂದೆ ತಾಯಿಯರ ವಿವರಣೆ ಬರುತ್ತದೆ. ಯಾವುದೇ ಅನುಮಾನಗಳು ಓದುಗರ ಮನಸ್ಸಿನಲ್ಲಿ ಮೂಢದಂತೆ ನಿರ್ವಹಿಸಿದ್ದಾನೆ. ಹಾಗೆಯೇ ಆತ ಯಾವುದೇ ಶಾಪಕ್ಕೆ ಒಳಗಾಗಿ ಬಂದವನಲ್ಲ. ಭಕ್ತರನ್ನು ಉದ್ಧರಿಸುವುದಕ್ಕಾಗಿ ಶಿವನೆ ಜನಿಸಿದ ವಿವರಗಳು ಸಿಗುತ್ತವೆ.

ಕಾಮಲತೆಯು ಸಾವಿನ ನಂತರ ಅಲ್ಲಮನಿಗೆ ವಿರಹವು ಆವರಿಸಿಕೊಳ್ಳುತ್ತದೆ. ಹರಿಹರ ಈ ವಿರಹ ವೇದನೆಯ ನರಳಾಟವನ್ನು ಸೊಗಸಾಗಿ ಚಿತ್ರಿಸಿದ್ದಾನೆಂದೆ ಹೇಳಬೇಕು. ಆಗ ಅವನ ಬದುಕಿನಲ್ಲಿ ಶೂನ್ಯವು ಕವಿದುಕೊಳ್ಳುತ್ತದೆ. ಈ ಶೂನ್ಯ ಮನಸ್ಸಿನಲ್ಲಿ ಕಣಿಗಿಲೆಯ ತೋಟದಲ್ಲಿ

ಕುಳಿತು ಚಿಂತಕ್ರಾಂತನಾಗಿ ನೆಲವನ್ನು ಕೆರೆಯುತ್ತಿರುವಾಗ ಹೊನ್ನ ಕಳಶವೊಂದು ಹೊಳೆಯುತ್ತದೆ. ರಾಜ ಪರಿವಾರದ ಸಹಾಯದಿಂದ ಆ ಕಳಶವನ್ನು ಬಿಡಿಸಿದಾಗ ದೇವಾಲಯವೊಂದು ಗೋಚರಿಸುತ್ತದೆ. ಆ ದೇವಾಲಯದೊಳಗೆ ಪ್ರವೇಶಿಸಲು ಎಲ್ಲರೂ ಹಿಂಜರಿಯುತ್ತಾರೆ. ಶೂನ್ಯತೆಗೆ ತಲುಪಿದ್ದ ಅಲ್ಲಮ ಆಗ ದೇವಾಲಯವನ್ನು ಪ್ರವೇಶಿಸುವುದು ಅತ್ಯಂತ ರೋಮಾಂಚನವನ್ನುಂಟು ಮಾಡುತ್ತದೆ. ದೇವಾಲಯ ಪ್ರವೇಶಿಸಿದ ಕೂಡಲೇ ಅವನಲ್ಲಿ ಅತೀತವಾದ ದಿವ್ಯ ಜ್ಞಾನವು ಅಂಕುರಿಸುತ್ತದೆ. ಗುಹೇಶ್ವರನ ದರ್ಶನವಾಗಿ "ಕೆಲನೀಕ್ಷಿಸಲನಿಮಿಷಯ್ಯಂಗಳೊಪ್ಪಿರಲು ಅಂಗೈಯಲ್ಲಿ ಅಮೃತಫಳ" ವನ್ನು ಪಡೆಯುತ್ತಾನೆ. ಈ ಸನ್ನಿವೇಶವು ಅತ್ಯುತ್ತಮವಾದುದು. ನಂತರ ಅಲ್ಲಮ ದಿವ್ಯಜ್ಞಾನವನ್ನು ಪಡೆದು ಕ್ಷೇತ್ರ ಪರ್ಯಟನೆ ಕೈಗೊಳ್ಳುತ್ತಾನೆ. ಇಲ್ಲಿ ಕೇವಲ ನಾಲ್ಕು ಪಂಕ್ತಿಗಳಲ್ಲಿಯೇ ಹರಿಹರ ಸಿದ್ಧರಾಮ ಮತ್ತು ಬಸವಣ್ಣರನ್ನು ಕಂಡು ಮಾತನಾಡಿದುದ್ದಾಗಿ ಹರಿಹರ ಚಿತ್ರಿಸಿ ಅಷ್ಟಕ್ಕೆ ಮುಗಿಸುತ್ತಾನೆ.

ಆದರೆ ಈ ಸನ್ನಿವೇಶ ಪ್ರಭುಲಿಂಗಲೀಲೆಯಲ್ಲಿ ಸುದೀರ್ಘವಾಗಿ ಹಲವು ಗತಿಗಳಷ್ಟು ದೀರ್ಘವಾಗಿ ಬಂದಿದೆ. ಹರಿಹರನ ಕಥೆಯು ಕೇವಲ ಒಂದೇ ಸ್ಥಳವಾಗಿರುವುದರಿಂದ ಈ ಎಲ್ಲಾ ಸನ್ನಿವೇಶಗಳಿಗೆ ಘಟನೆಗಳಿಗೆ ವಿವರವಾಗಿ ಚರ್ಚಿಸಲು ಹರಿಹರನಿಗೆ ಸಾಧ್ಯವಾಗಿಲ್ಲವಾಗಿರಬಹುದು ಅಥವಾ ಮತ್ಯಾವುದೋ ಕಾರಣವಿದೆಯೋ ತಿಳಿದು ಬರುವುದಿಲ್ಲ. ಆದರೆ ಪ್ರಭುಲಿಂಗ ಲೀಲೆಯಲ್ಲಿ ಮಾತ್ರ ಸಿದ್ಧರಾಮ, ಗೊಗ್ಗಯ್ಯ ಮುಕ್ತಾಯಕ್ಕ, ಬಸವಣ್ಣ, ಅಕ್ಕಮಹಾದೇವಿ, ಮರುಳು ಶಂಕರದೇವ, ಗೋರಕ್ಷಕ ಹೀಗೆ ಇನ್ನು ಹಲವು ಸನ್ನಿವೇಶಗಳ ರಚನೆಯಿಂದಾಗಿ ಕೃತಿಯು ಬೃಹತ್ತಿನ ಜೊತೆಗೆ ಮಹತ್ತಿನಿಂದಲೂ ಕಂಗೊಳಿಸಿರುವುದು ಕಂಡುಬರುತ್ತದೆ. ಈ ತೌಲನಿಕ ನೋಟದ ಮೂಲಕ ಪ್ರಭುದೇವರ ಜೀವನದ ವಿವರಗಳು, ಜೀವನಾದರ್ಶ ಮುಂತಾದವುಗಳ ಜೊತೆಗೆ ಚಾರಿತ್ರಿಕ ಅಂಶಗಳು ಗೋಚರಿಸುತ್ತವೆ.

### ಆ) ಸನ್ನಿವೇಶ ರಚನೆ :

'ಪ್ರಭುಲಿಂಗಲೀಲೆ'ಯು ಉತ್ತಮ ಕೃತಿಯೆಂಬುದು ಅಷ್ಟೇ ಅಲ್ಲದೆ ಪ್ರಭುಲಿಂಗ ಲೀಲೆಯ ಕಥಾಸರಣಿಯೂ, ಸನ್ನಿವೇಶಗಳೂ, ಪಾತ್ರಗಳ ಗುಣಶೀಲಗಳನ್ನು ವ್ಯಕ್ತಪಡಿಸಿರುವುದು ಹಾಗೆಯೇ ಅಲ್ಲಿ ಕವಿಯು ತಂದಿರುವ ವರ್ಣನೆಗಳು ಉತ್ತಮ ನಿದರ್ಶನವಾಗಿವೆ. 'ಪ್ರಭುಲಿಂಗಲೀಲೆ'ಯು ಲಿಂಗ ಭಕ್ತರಿಗಾಗಿ ಲಿಂಗ ಮಾರ್ಗೋಪದೇಶಮಾಡುವ ಕಾವ್ಯವಾಗಿರುವುದರಿಂದ ಇಲ್ಲಿ ಕವಿಯ ಶಕ್ತಿ ಪ್ರದರ್ಶನಕ್ಕೆ ಹೆಚ್ಚು ಅವಕಾಶದೊರೆಯುವುದಿಲ್ಲವೆಂದೇ ಹೇಳಬಹುದು. ಇಲ್ಲಿಯ ಕಥಾಗರ್ಭದ ಸಂಕೀರ್ಣ ಸನ್ನಿವೇಶಗಳಲ್ಲಿ ಮನುಷ್ಯ ಸಹಜವಾದ ಕೋಪ, ಹಠ, ವೈರ ಮುಂತಾದ ಕ್ಷಾತ್ರರಸಗಳ ಪ್ರದರ್ಶನದ ಆಡಂಬರವಿಲ್ಲ. ಸಿದ್ಧರಾಮನ ಪ್ರಸಂಗದಲ್ಲಿ ಮಾತ್ರ ಈ ರೀತಿಯ ಗುಣವನ್ನು ಕಾಣಬಹುದು. ಇಲ್ಲಿ ಮುಖ್ಯವಾಗಿ ಚಿತ್ರಿತವಾಗಿರುವುದು ವೈರಾಗ್ಯ ಮೂರ್ತಿಯಾದ ಅಲ್ಲಮನ ಶಾಂತ ಚಿತ್ತ ಕಾವ್ಯದ ಧ್ಯೇಯ ಶಿವತತ್ವದ ಸಾಧನೆಯೇ ಆಗಿದೆ. ಕಾವ್ಯದ ಯಾವುದೇ ಸಂದರ್ಭದಲ್ಲಿಯೇ ಆಗಲಿ ಶುಷ್ಕವೇದಾಂತದ ಉಪದೇಶವೆನಿಸದೆ ಮನುಷ್ಯ ಸಹಜವಾದ ಸ್ಥಾಯಿಭಾವ ನೆಲೆಯೂರಿ ನಿಲ್ಲುತ್ತದೆ. ಅಲ್ಲಮನ ಜೀವನ ವಿವರಗಳನ್ನು ಬರೆಯುವ ಸಂದರ್ಭದಲ್ಲಿ ಕವಿಯು ಕೇವಲ ಒಂದೆರಡು ಪದ್ಯಗಳಲ್ಲಿಯೇ ವರ್ಣಿಸಿದ್ದಾನೆ. ಪ್ರಭುಲಿಂಗಲೀಲೆಯಲ್ಲಿ ಹಲವು ಗತಿಗಳಲ್ಲಿ ಕಥೆಯು ವಿಸ್ತಾರವಾಗಿ ಹರಡಿಕೊಂಡಿದೆ. ಪಾರ್ವತಿಯ ಪ್ರತಿಜ್ಞೆ, ಮಾಯಾದೇವಿಯ ಬಾಲ್ಯ, ಅಲ್ಲಮನಲ್ಲಿ ಮಾಯೆಗೆಮೋಹ, ಅಲ್ಲಮನ ವೃತ್ತಾಂತ, ಮಾಯೆಯ ತಿರಸ್ಕಾರ

ಬಸವಾದಿಗಳ ಅವತಾರ, ಮಹದೇವಿಯಕ್ಕನ ವಿರಕ್ತಿ, ಗೊಗ್ಗಯ್ಯನಿಗೆ ಉಪದೇಶ, ಮುಕ್ತಾಯಕ್ಕನಿಗೆ ಉಪದೇಶ, ಸಿದ್ಧರಾಮನಿಗೆ ಉಪದೇಶ, ಬಸವರಾಜನಿಗೆ ಇಷ್ಟಲಿಂಗೋಪದೇಶ, ಪ್ರಾಣಲಿಂಗೋಪದೇಶ, ಗೋರಕ್ಷಾದಿಗಳಿಗೆ ಉಪದೇಶ, ಶೂನ್ಯಸಿಂಹಾಸನಾ ರೋಹಣ, ಪಾರ್ವತಿಯ ಪ್ರಸನ್ನತೆ, ಹೀಗೆ ಒಟ್ಟು 25 ಗತಿಗಳಲ್ಲಿ ಕಥೆಯು ವಿಸ್ತಾರವಾಗಿ ಹರಡಿಕೊಂಡಿದೆ. ಆದರೆ ಹರಿಹರ ಕವಿಯ ರಗಳೆಯಾದ ಪ್ರಭುದೇವರ ರಗಳೆ ಯಲ್ಲಿ ಕಥೆಯು ತುಂಬ ಚಿಕ್ಕದಾಗಿ ಚಿತ್ರಣಗೊಂಡಿದೆ. ಆದರೂ ಕಥಾಹಂದರದಲ್ಲಿ ಅಲ್ಲಮನ ಹುಟ್ಟು, ಕಾಮಲತೆಯ ಹುಟ್ಟು, ಅಲ್ಲಮ ಕಾಮಲತೆಯರ ನಡುವಿನ ಮೋಹ, ಕಾಮಲತೆಯ ಸಾವು, ಅಲ್ಲಮನ ವಿರಹ, ನಂತರ ಶಿವಾಲಯದ ದರ್ಶನ, ಶಿವಾಲಯ ಪ್ರವೇಶ, ಅನಿಮಿಷ ಲಿಂಗ ಪ್ರಾಪ್ತಿ ನಂತರ ಅಲ್ಲಮನ ಬೋಧೆ – ಹೀಗೆ ರಗಳೆಯೂ ಸಂಕೀರ್ಣ ಘಟನೆಗಳ ವಿವರಗಳಿಂದ ತುಂಬಿದೆ.

೧. ಅಲ್ಲಮನ ಹುಟ್ಟು – ಪ್ರಭುದೇವರರಗಳೆಯ ಕಾಮಲತೆ – ಪ್ರಭುಲಿಂಗಲೀಲೆಯ ಮಾಯೆಯ ಭೇಟಿ :

ಪ್ರಸ್ತುತ ಸಂದರ್ಭದಲ್ಲಿ ತೌಲನಿಕ ಅಧ್ಯಯನಕ್ಕೆ ಕೆಲವು ಸನ್ನಿವೇಶಗಳನ್ನು ತುಲನೆಮಾಡಿ ನೋಡಬಹುದು. ಮೊದಲಿಗೆ ಹರಿಹರನ ರಗಳೆಯ ಕಥೆಯನ್ನು ಸ್ಥೂಲವಾಗಿ ನೋಡಬಹುದು. ನಿರ್ಮಾಯನೆಂಬ ಗಣನು ಶಾಪಗ್ರಸ್ತನಾಗಿ ಬಳ್ಳಿಗಾವೆಯಲ್ಲಿ ಅಲ್ಲಮನಾಗಿ ಹುಟ್ಟಿದನು. ಮೃದಂಗ ವಿದ್ಯೆಯಲ್ಲಿ ಪರಿಣತನಾಗಿ ಅವನು ಒಂದು ದಿನ ಶಿವಾಲಯದಲ್ಲಿ ಕಾಮಲತೆಯೆಂಬ ಕನ್ಯೆಯನ್ನು ಕಂಡು ಮೋಹಿತನಾಗಿ ಹಲವು ವರ್ಷ ಅವಳೊಂದಿಗೆ ಸುಖವಾಗಿದ್ದನು. ಮಹಾಜ್ವರದಿಂದ ಕಾಮಲತೆ ಸತ್ತುಹೋಗುತ್ತಾಳೆ. ವಿರಕ್ತಿಬಂದು ಊರು ಬಿಟ್ಟುಹೋದನು. ಬಳಿಕ ಭೂಮಿಯೊಳಗೆ ಹುದಗಿದ್ದ ಶಿವಾಲಯದಲ್ಲಿದ್ದ ಅನಿಮಿಷಯ್ಯನಿಂದ ಲಿಂಗದೀಕ್ಷೆ ಪಡೆದನು. ಕ್ಷೇತ್ರಯಾತ್ರೆ ಮಾಡುತ್ತ ಬಸವಣ್ಣನನ್ನು ಮಾತನಾಡಿಸಿದ ಸಿದ್ಧರಾಮನಿಗೆ ಕರ್ತವ್ಯವನ್ನು ಬೋಧಿಸಿ, ಶ್ರೀಶೈಲದ ಕದಳಿ ಬನಕ್ಕೆ ಬಂದನು. ಅಲ್ಲಿಂದ ಕೈಲಾಸಕ್ಕೆ ನಡೆದು ಹಿಂದಿನ ಗಣ ಪದವಿಯಲ್ಲಿ ನಿಂತುದ್ದಾಗಿ ಹರಿಹರ ಕವಿಯಿಂದ ತಿಳಿದು ಬರುತ್ತದೆ.



ಮೇಲಿನ ಕಥೆಯನ್ನು ಗಮನಿಸಿದಾಗ ಅಲ್ಲಮನ ಜೀವನದಲ್ಲಿ ಕವಿಯು ಎರಡು ಪ್ರಮುಖ ಘಟ್ಟಗಳನ್ನು ಕಲ್ಪಿಸಿಕೊಂಡಿದ್ದಾನೆ. ಬಳ್ಳಿಗಾವಿಯಲ್ಲಿ ಜನಿಸಿದಂದಿನಿಂದ ಅನಿಮಿಷಯ್ಯನ ದರ್ಶನದವರೆಗಿನದು ಒಂದು ಘಟ್ಟವಾದರೆ, ಅನಿಮಿಷಯ್ಯನಿಂದ ಲಿಂಗವನ್ನು ಪಡೆದು ನಂತರ ವೀರ ವಿರಕ್ತನಾಗಿ, ಜ್ಞಾನಿಯಾಗಿ ಲಿಂಗನಡೆಸಿದತ್ತ ನಡೆದು ಬಸವಣ್ಣ, ಸಿದ್ಧರಾಮರನ್ನು ಸಂದರ್ಶಿಸಿ ಕೊನೆಗೆ, ಕೈಲಾಸದಲ್ಲಿ ಶಿವನ ಸಾಮಿಪ್ಯದಲ್ಲಿ ಗಣ ಪದವಿಯನ್ನು ಪಡೆಯುವ ವರೆಗಿನದು ಮತ್ತೊಂದು ಘಟ್ಟ.

ಅಲ್ಲಮ ಕಾಮಲತೆಯರ ಪ್ರಣಯದ ಜೀವನದ ನಿರೂಪಣೆ ದೀರ್ಘವಾಗಿಯೇ ಬಂದಿದೆ. ಅಲ್ಲದೆ ರಸಪೂರ್ಣವಾಗಿಯೂ ಇದೆ. ಆದರೆ ಆತನ ಮಹಮಾನ್ವಿತ ವ್ಯಕ್ತಿತ್ವವನ್ನು ಕಂಡರಿಸಿ ನಿಲ್ಲಿಸಬೇಕಾಗಿದ್ದ ಉತ್ತರಾರ್ಧವು ತೀರ ಸಂಕ್ಷಿಪ್ತವಾಗಿದೆ. ರಗಳೆಯಲ್ಲಿ ಕಥೆಯು ಆರಂಭದಿಂದ ಅಂತ್ಯದವರೆಗೂ ಅತಿ ಅವಸರವಾಗಿಯೇ ಸಾಗುವುದನ್ನು ಗಮನಿಸಬಹುದು. ಮುಖ್ಯವಾಗಿ ಜರುಗಬೇಕಾಗಿದ್ದ ಅನುಭವ ಮಂಟಪ, ಶೂನ್ಯ ಸಿಂಹಾಸನಾರೋಹಣಾದಿಸಂಗತಿಗಳು ಇಲ್ಲಿ ಬರುವುದೇ ಇಲ್ಲ. ಬಸವಣ್ಣ ಮತ್ತು ಸಿದ್ಧರಾಮರ ನಡುವಿನ ಸಂದರ್ಶನ ಕೇವಲ ಐದು ಸಾಲುಗಳಲ್ಲಿ

ಮುಗಿಯುತ್ತದೆ. ಅಲ್ಲದೆ ಗೊಗ್ಗಯ್ಯ, ಮುಕ್ತಾಯಕ್ಕ, ಗೋರಕ್ಷಕರೇ ಮುಂತಾದ ಸಾಧಕರನ್ನು ಅಲ್ಲಮ ಸಂದರ್ಶಿಸಿದುದು ಉಲ್ಲೇಖ ಕೂಡ ಇಲ್ಲ. ಈ ಎಲ್ಲಾ ಸನ್ನಿವೇಶಗಳು ಪ್ರಭುಲಿಂಗಲೀಲೆಯಲ್ಲಿ ತುಂಬ ದೀರ್ಘವಾಗಿ ರಸವತ್ತಾಗಿ ಮೈದಳೆದಿರುವುದು ವಿಶೇಷವಾಗಿದೆ. ಈ ಸನ್ನಿವೇಶಗಳು ಶಿವಗಣ ಪ್ರಸಾದಿ ಮಹದೇವಯ್ಯನವರ ಶೂನ್ಯ ಸಂಪಾದನೆಗಳಲ್ಲಿಯೂ ಅನಾವರಣಗೊಂಡಿದೆ. ಇಷ್ಟೆಲ್ಲಾ ಸಂಗತಿಗಳ ಕೊರತೆಯ ನಡುವೆಯೂ ಉತ್ತಾರಾರ್ಧದ ಕಥೆಯಲ್ಲಿ ಅಲ್ಲಮನ ಮಹೊನ್ನತ ವ್ಯಕ್ತಿತ್ವದ ದರ್ಶನವಾಗುತ್ತದೆ. ಸಹೃದಯರು ಅದನ್ನು ಅನುಭವಿಸುತ್ತಾರೆ ಎನ್ನುವುದರಲ್ಲಿ ಯಾವುದೇ ಅನುಮಾನವಿಲ್ಲ.

ಅನಿಮಿಷಯ್ಯನಿಂದ ಲಿಂಗವನ್ನು ಪಡೆದ ನಂತರ ಅಲ್ಲಮನ ವ್ಯಕ್ತಿತ್ವದಲ್ಲಿ ಬಹುದೊಡ್ಡ ಮಾರ್ಪಾಡು ಆಗುತ್ತದೆ. ಈ ಘಟನೆಯನ್ನು ಹರಿಹರ ಕವಿಯು ಹಟಾತ್ತನೆ ಫಲಿಸಿದಂತೆ ಚಿತ್ರಿಸಿದ್ದಾನೆ. ಈ ಸಂದರ್ಭವನ್ನು ಕುರಿತು ಸಹೃದಯರಲ್ಲಿ ಒಮ್ಮೆಲೆ ಸಂಶಯ ಮೂಡಿದರೂ, ಲಿಂಗ ಪ್ರಾಪ್ತಿಯಾದನಂತರದಲ್ಲಿ ಅಲ್ಲಮನು ಪಡೆಯುವ ಅನುಪಮ ಸಿದ್ಧಿಯನ್ನು ಕವಿಯು ಸುಂದರವಾಗಿ ಚಿತ್ರಿಸಿದ್ದಾನೆ. ಪ್ರಭುಲಿಂಗಲೀಲೆಯಲ್ಲಿ ಬರುವ ಮಾಯೆ, ಅಲ್ಲಮರ ಸಂವಾದ ಮತ್ತು ಮಾಯೆಯ ಸಾವಿನ ಪ್ರಸಂಗವು ಹರಿಹರ ಕವಿಯ ರಗಳೆಯಲ್ಲಿಯ ರೀತಿಯಲ್ಲಿಯೇ ಚಿತ್ರಿತವಾಗಿವೆ.

ಅಲ್ಲಮನ ಯೌವನದ ಸಂದರ್ಭವನ್ನೂ ಸಹ ಕವಿ ಮಿತಿಮೀರಿ ವರ್ಣಿಸುವ ಗೋಜಿಗೆ ಹೋಗುವುದಿಲ್ಲ. "ಕಾವಂಗೆ ಸಿಂಗರದ ಹುರುಡು ಹುಟ್ಟುತ್ತಮಿರೆ.........ವನಿತೆಯರ ಮನವನಿಕ್ಕುಳಿಗೊಳ್ವನಿವನೆನಿಪ" ಎಂಬಷ್ಟರಲ್ಲೆ ಅವನ ಯೌವನದ ತೇಜಸ್ಸನ್ನು ಚಿತ್ರಿಸುತ್ತಾನೆ. ಕಾಮಲತೆಯ ಯೌವನವನ್ನು ಚಿತ್ರಿಸುವಾಗಲೂ ಕವಿ ಇದೇ ಮಾರ್ಗ ಅನುಸರಿಸುತ್ತಾನೆ. "ಮದನಶರವಿಕ್ಷುಧನುವಿಂದೆ ಪೊಜಿಮಡುವಂತೆ ಪಡೆದು ಸುವಿಟರ ಮೇಲೆ ಧಾಳಿ ಪೊಜಿಮಡುವಂತೆ" ಎಂಬ ಒಂದೆರಡೇ ವಾಕ್ಯದಲ್ಲಿ ಕವಿ ಕಾಮಲತೆಯ ತುಂಬಿದ ಯೌವನವನ್ನು ಬಣ್ಣಿಸುತ್ತಾನೆ. ಅವನ ವರ್ಣನೆಗಳಲ್ಲಿ ಸ್ವಲ್ಪವೂ ಅಶ್ಲೀಲವಿಲ್ಲ, ಅನೌಚಿತ್ಯವಿಲ್ಲ. ಕಥೆಗೆ ಯಾವುದೇ ಭಂಗ ಬಾರದ ಹಾಗೆ ಕವಿ ಚಿತ್ರಿಸಿದ್ದಾನೆ.

ಕಾಮಲತೆ ಮತ್ತು ಅಲ್ಲಮ ಪ್ರಥಮ ಬಾರಿಗೆ ಅನುರಾಗಕ್ಕೆ ಒಳಗಾಗುವ ಸನ್ನಿವೇಶವೂ ಕಥೆಯಲ್ಲಿ ಬಹಳ ಸೊಗಸಾಗಿದೆ. ಹಾಗೆಯೇ ಕವಿ ಅಲ್ಲಮ ಮತ್ತು ಕಾಮಲತೆಯರ ನಡುವಿನ ಪ್ರಣಯವನ್ನು ಸೊಗಸಾಗಿ ನಿರೂಪಿಸಿದ್ದಾನೆ. ಈ ನಿರೂಪಣೆಯಲ್ಲಿ ಕವಿ ಬಹಳಷ್ಟು ಎಚ್ಚರಿಕೆ ವಹಿಸಿದ್ದಾನೆ. ಅನೌಚಿತ್ಯವಾದ ಪದಗಳಾಗಲಿ, ವಾಕ್ಯವಾಗಲಿ ಬಾರದ ಹಾಗೆ ನೋಡಿ ಕೊಂಡಿದ್ದಾನೆ. ಕಾಮಲತೆ ಮತ್ತು ಅಲ್ಲಮರ ನಡುವಿನ ಅತಿಯಾದ ಪ್ರಣಯವೇ ಮುಂದೆ ಅಲ್ಲಮನ ಬದುಕಿನ ಹಾದಿಯ ಮಹತ್ವದ ತಿರುವಾದ್ದರಿಂದ ಕವಿ ಈ ಭಾಗವನ್ನು ರಮ್ಯವಾಗಿ ಚಿತ್ರಿಸಿದ್ದಾನೆ. ಆದರೂ ಅತಿರಮ್ಯವೆಂಬುದು ಕಂಡು ಬರುವುದಿಲ್ಲ. ವರ್ಣನೆ ಹಿತಮಿತವಾಗಿ ಮೂಡಿಬಂದಿದೆ. ಕಾಮಲತೆಗೆ ಜ್ವರ ಬಂದ ಸನ್ನಿವೇಶವನ್ನು ಕವಿಯು ಮನಕಲಕುವಂತೆ ಚಿತ್ರಿಸಿದ್ದಾನೆ.

ಕಾಮಲತೆಯಂ ಬಂದು ಪತ್ತಿತು ಮಹಾಜ್ವರಂ
ಸೋಮಕಳೆಯಂ ರಾಹು ಮುತ್ತು ವಂತಿರೆ ಕರಂ

---

ಜ್ವರದ ಪರಿತಾಪದಿಂದವಯವಂ ಸೀಳುತಂ
ತರುಣಿ ಸೈರಿಸಲಾಱದೇಳುತಂ ಬೀಳುತಂ
ಈ ವಸುಧೆಯೊಳಗಣ ಸುಖಂ ತನಗೆ ಸಾಕೆಂದು
ದೇವಲೋಕಕ್ಕೆ ನಡೆದಳು ಕಾಮಲತೆಯಂದು [೭]

ವಿಧಿಯ ವಿಚಿತ್ರ ಲೀಲೆ ಅವರ ಸುಖ ಜೀವನಕ್ಕೆ ಕೊನೆಯನ್ನು ತರುತ್ತದೆ. ಇದ್ದಕ್ಕಿದ್ದಂತೆ, ಕಾಮಲತೆ ಮಹಾಜ್ವರಪೀಡಿತೆಯಾಗಿ ನಿಧನವಾಗುತ್ತಾಳೆ. ಅಲ್ಲಯ್ಯನಿಗೆ ಸಿಡಿಲೆರಗಿದಂತಾಯಿತು. ಅಲ್ಲಮನು ಅಪಾರ ದುಃಖದಲ್ಲಿ ಬೆಂದು ಮರುಳನಂತೆ ದಿಕ್ಕುದೆಸೆಯಿಲ್ಲದೆ ತಿರುಗತೊಡಗುತ್ತಾನೆ.

ನಿಂದನಲ್ಲಮ ನೊಳಗೊಳಗಳಲ್ದು ಬಳಲುತಂ
ಸಂದ ನೇಹದ ಸದ್ಗುಣಂಗಳಂ ನೆನೆವುತಂ
ಕಾಮಲತೆ ಮತ್ತೆ ಮನಮಂ ಸುತ್ತಲಲ್ಲಮಂ
ಕಾಮಲತೆ ಕಾಮಲತೆಯನುತಿರ್ದನಲ್ಲಮಂ [೮]

ಹಾಗೆ ಅಲೆಮಾರಿಯಾಗಿ ಸುತ್ತುತ್ತ ಒಂದು ದಿನ ಊರ ಹೊರಗಿನ ಕಣಗಿಲೆಯ ತೋಟಕ್ಕೆ ಬರುತ್ತಾನೆ. ಅಲ್ಲಿ ಕೈತಲೆವಾಗಿ ಕಣ್ಣನೀರ್ ಕರೆದು ಚಿಂತಿಸುತ್ತಿರುವಾಗ, "ನೆಲನಂ ಬರೆಯ ಬರೆದ ಹೆಜ್ಜೆಯೊಳಗೊಂದು, ಹೊನ್ನ ಕಲಶಂದೋರಲತಿ ಕೌತುಕಂಬಟ್ಟು" ಅಲ್ಲಯ್ಯ ಅಗೆದ, ಬಗೆದ, ಇನ್ನೂ ಬಗೆದ, ಆ ಹೊನ್ನ ಕಳಶ ಅಲ್ಲಯ್ಯನಿಗೆ, "ಹರಹರ ಸಿವಜ್ಞಾನದಂಕುರಂ ತೋರ್ಪಂತೆ ಪರಮ ಮುಕ್ತ್ಯಂಗನೆಯ ಕುಚದಕುಡಿ ತೋರ್ಪಂತೆ", ಕಾಣಿಸಿತಂತೆ.

ಬೆರಲಿಲ್ಲ ಕಿವಿಯಿಲ್ಲ ಮುಡುಹು ಮುಂದಲೆಯಿಲ್ಲ
ಉರವಿಲ್ಲ ಮೂಗಿಲ್ಲ ಸತಿ ಕಾಮಲತೆಯಿಲ್ಲ
ಇನ್ನೇಕೆ ದೇಹದಭಿಲಾಷೆ ಚಿತೆಗೆಯೆಂದು
ತನ್ನ ಮನದೊಳಗೆ ನಿಶ್ಚಯಿಸಿ ಭರದಿಂ ಬಂದು [೯]

ಅಲ್ಲಯ್ಯ ಧಾವಿಸಿ ಹೋಗಿ ಪುರದ ಅರಸನಿಗೆ ತಿಳಿಸಿದ. ಊರಿನ ದೊರೆ ಆಶ್ಚರ್ಯಗೊಂಡು ಪರಿಜನಕ್ಕೆ ನೆಲವನ್ನಗೆಯಲು ಆಜ್ಞೆ ನೀಡುತ್ತಾನೆ. ವೃಷಭಾಂಕಿತ ಶಿವಾಲಯವೊಂದು ಬಯಲಿಗೆ ಬರುತ್ತದೆ. ಅರಸನಿಗೆ ರೋಮಾಂಚನವಾಯಿತು. ಆ ಶಿವಾಲಯುವನ್ನು ಪ್ರವೇಶಿಸಿ ಅಲ್ಲಿರುವುದೇನೆಂಬುದನ್ನು ತಿಳಿದು ಬರುವುದಕ್ಕೆ ಸಾಹಸಿಯೊಬ್ಬನನ್ನು ರಾಜ ಹುಡುಕುತ್ತಾನೆ. ಯಾರೊಬ್ಬರು ತಾವೇ ಮುಂದೆ ಬರುವುದಿಲ್ಲ: ಈ ಸಾಹಸಕ್ಕೆ ಇಳಿಯುವುದಿಲ್ಲ. ಕಾಮಲತೆಯನ್ನು ಕಳೆದುಕೊಂಡು ಕಂಗೆಟ್ಟಿದ್ದ ಅಲ್ಲಮ, ದೇಹದ ದುರಾಶೆ ಇನ್ನೇಕೆ ಎಂದು ನಿಶ್ಚಯಿಸಿ, "ಬೆಸಸು, ಬೆಸಸಾನೆ ಪೊಕ್ಕಪೆಂ" ಎಂದು ಧೈರ್ಯದಿಂದ ನುಡಿದ. ಎಲ್ಲರಿಗೂ ಬೆಕ್ಕಸ ಬೆರಗಾಗುತ್ತಾರೆ.

ಮೈಗೆಲ್ಲ ಭಸಿತೋದ್ಧೂಳನ ಮಾಡಿಕೊಂಡು, ಯಾವ ಭೀತಿಯಿಲ್ಲದೆ ಶಿವನೆ ಶರಣೆನ್ನುತ್ತ ಅಲ್ಲಮ ಮುಚ್ಚಿದ್ದ ಕದವನ್ನು ತೆರೆದು ಭೋಂಕನೆ ಒಳಹೊಕ್ಕ, ತನ್ನೊಳಗೆ ಹೊಕ್ಕಂತೆ. ಅಲ್ಲಿ, ಕೂಡಲೆ ಲೋಕವಾರ್ತೆಯ ನೆರೆ ಮರೆದು, ಬಗೆ ಬೇರೆ ಪೊಸತಾಯಿತು. ಆ ಮಣ್ಣು ಮರೆಯ

ಭವ್ಯ ದೇವಾಲಯದೊಳಗೆ ಮಹಾಲಿಂಗ ದರ್ಶನವಾಯಿತು. ಕೂಡಲೆ ಲಿಂಗಕ್ಕೆ ಅಡಿಗೆರಗಿ ಮಗ್ಗುಲಿಗೆ ತಿರುಗುತ್ತಾನೆ. ಅಲ್ಲಿ ಅವನು ಕಂಡ ನೋಟದಿಂದ ಅವನ ಮೈ ಜುಮ್ಮೆನಿಸುತ್ತದೆ. ಅವನಿಗೆ ದೇದೀಪ್ಯಮಾನ ದಿವ್ಯಮೂರ್ತಿಯೊಂದು ಕಂಗೊಳಿಸಿತು.

ತೊಲಗಲುಗದ ಲಿಂಗ ನಿಜಸಿದ್ಧನೊಪ್ಪಿರಲು
ಬತ್ತಿಯಿಲ್ಲೆಣ್ಣೆಯಿಲ್ಲದ ದೀಪ್ತಿ ಬೆಳಬೆಳಗೆ
ಸುತ್ತಲುಂ ಶಿವಕಳೆಯ ತಂಬೆಳಗು ತೊಳತೊಳಗೆ
ತಿಳಿದ ನಿರ್ಮಲ ಜಳದ ಘನದ ಬೆಳೆಗೆಂತಂತೆ
ಬೆಳಗುಗಳ ಬಳಗದೊಳಗಿರ್ದಪರಿಯಂತಂತೆ
ಕೀಲಿಸಿದ ಪದ್ಮಾಸನಂ ಪುಲಿದೊವಲ್ ತನುವ
ನಾಲಂಗಿಸಿದ ಭಸಿತವಮಳಸೂತ್ರಂ ಮೆಱೆವ
ಬೆಳಪ ಕಣ್ ಸುಲಿಪಲ್ಲು ಹೊಳೆವ ಮುಖಮಂಡಳಂ
ಇಳಿದ ಜಡೆ ರುದ್ರಾಕ್ಷಿ ಮಾಲೆ ಫಣಿಕುಂಡಲಂ
..................................................................
ಅರಳ್ದ ನಯನದ್ವಯಂ ವಿಕಸಿತ ಕುಸುಮವಾಗೆ
ಕರತಳದ ಶಿವಲಿಂಗ ವಂದಮೃತ ಫಲವಾಗೆ
ಕಲ್ಪತರುವಿನ ತೆರದೊಳಿರ್ದನಾ ಶಿವಯೋಗಿ
ಕಣ್ಣಲ್ಲಿಜೀವಮಂ ಪಿಡಿದಿರ್ದ ಮಾಳ್ಕೆಯಿಂ
ಸನ್ನಿಧಿಯ ಗುಣ ಶಿವಜ್ಞಾನಂ ಪುಟ್ಟಿಸಲು
ತನ್ನೊಳಗೆ ಶಿವನ ತತ್ವಂ ಘನವನೆಯ್ದಿಸಲು ೧೦

ಇದ್ದ ಶಿವಯೋಗಿಯನ್ನು ಅಲ್ಲಮ ಕಂಡ. ಸುತ್ತೆಲ್ಲ ಶಿವಕಳೆ, ಅಚಂಚಲ ಯೋಗಿ. ಅನಿಮಿಷ ನೋಟ!ಅಲ್ಲಮನ ಹೃದಯದಿಂದ ತಂತಾನೆ ಶಿವಸಿದ್ಧಯೋಗಿಯ ಮಹಿಮಾಸ್ತೋತ್ರ ಹೊರಹೊಮ್ಮಿತು:

ದೇವ ನಿರ್ಮಳ ನಿತ್ಯ ನಿರುಪಮ ಮಹಾಯೋಗಿ
ದೇವ ನಿರ್ಮಳ ನಿಜಾನಂದ ಕರಶಿವಯೋಗಿ
..........................................................
ನೋಟದೊಳು ಲಿಂಗಮಂ ಸೆಱೆಗೆಯ್ದ ಶಿವಯೋಗಿ
ಕೂಟದೊಳು ಕಣ್ಣೆ ತನುವಾದ ಬೆಳಗಿನ ಯೋಗಿ
ಮದನನಂ ಮರ್ದಿಸಿಯೆ ಸಂದಿರ್ದಭವಯೋಗಿ
ಹೃದಯದೊಳು ಭಕ್ತಿಯ ತಿಳಿದಿರ್ದ ಶಿವಯೋಗಿ ೧೧

ಅನಿಮಿಷ ಯೋಗಿಯ ಭೌತಿಕ ಶರೀರವೆಲ್ಲ ಗಳಿತಗೊಂಡಿತ್ತು. ಲಿಂಗದೊಳು ನೆಟ್ಟ ಅನಿಮಿಷ ದೃಷ್ಟಿಯೇ ಅವನ ಶರೀರ-ಸಮಸ್ತವಾಗಿದ್ದುದನ್ನು ಅಲ್ಲಮ ಗಮನಿಸಿದ. ಆಗ ಆತ ಕಾಮಲತೆಯ ವಿಯೋಗದಿಂದ ಜರ್ಜರಿತನಾಗಿದ್ದ ಅಲ್ಲಮನಾಗಿ ಉಳಿಯಲಿಲ್ಲ. ಆತನ ಮನದಲ್ಲಿ

ಅತ್ಯದ್ಭುತ ಪರಿವರ್ತನೆ ಆಯಿತು. ತಾನು ನೋಡುತ್ತಿದ್ದ ಆ ಮಹಾಗುರುವಿನ ಅನುಗ್ರಹ ದೊರೆತರೆ ಸಾಕೆಂದು ಆತುರದಿಂದ ನಿರೀಕ್ಷಿಸುತ್ತಾನೆ. ಅನಿಮಿಷನ ಅಂತಃಕರಣ ಕರಗುತ್ತದೆ. ತನಗೆ ತಕ್ಕ ಶಿಷ್ಯದೊರೆತನೆಂಬ ಸಂಭ್ರಮದಲ್ಲಿ ಅನಿಮಿಷ ಹಾಗೂ ಅಲ್ಲಮರ ಮನಮನ ಒಂದಾದವು. ಅನಿಮಿಷ, ತನ್ನ ದೃಷ್ಟಿ, ಧ್ಯಾನ ಹಾಗೂ ಸ್ಪರ್ಶನಗಳನ್ನು ಏಕಕಾಲಕ್ಕೆ ಪ್ರಯೋಗಿಸಿ, ಅಲ್ಲಮನಲ್ಲಿ ಶಕ್ತಿಪಾತ ಮಾಡುತ್ತಾನೆ. ಆಗ,

ಇಳುಪಿದಂತಾಯ್ತು ಶಿವಲಿಂಗಂ ನಿರೀಕ್ಷಣದೆ
ನೋಟದಿಂದಂಗೈಯ್ಯೊಳಿಕ್ಕಿದಂ ಲಿಂಗಮಂ
ಕೂಟದಚ್ಚಳಿಯದಸುವೆರಸಿ ಶಿವಲಿಂಗಮಂ
ಲಿಂಗದೊಡನೇ ಬೆರೆಸಿ ಹೋದುದಾತನ ಜೀವ
ಅಂಗಂಗಿದುದು ಭಿತ್ತಿಯ ಬಱಿ ಭಾವ [೧೨]

ಲಿಂಗವೇ ತಾನಾಗಿದ್ದ ಅನಿಮಿಷನ ಜರ್ಜರಿತವಾಗಿದ್ದ ಅಂಗ, ಅವನ ಇಷ್ಟಲಿಂಗದೊಡನೆ ಅಲ್ಲಮನ ಅಂಗ ಸೇರಿತಂತೆ. ಅನಿಮಿಷನ ಅಖಂಡ ಲಿಂಗಾರ್ಚನೆಯ ಅಮೃತ ಫಲ ಅವನ ಲಿಂಗದಲ್ಲಿ ಸುಪ್ತವಾಗಿತ್ತು. ಅದು ಆ ಲಿಂಗದೊಡನೆ ಅಲ್ಲಮನ ಅಂಗವನ್ನು ಪ್ರವೇಶಿಸಿತು ಎಂದು ಅರ್ಥಮಾಡಬಹುದು. ಆ ಲಿಂಗದ ಸ್ಪರ್ಶದಿಂದ, ಅವನ ಅವಯುವಗಳೆಲ್ಲ ರಾಗದಿಂದಂಕುರಿಸಿ ನಳನಳಿಸಿದವು ಚಲ್ವಿಂದ, ಅವನ ಅಂತರಂಗದಲ್ಲೂ ಕ್ರಾಂತಿಯಾಗಿ ಬೆಳಕಾಯಿತು. ದಾರಿ ಕಾಣದಾಗಿದೆ ಎಂಬ ಸ್ಥಿತಿಯಿಂದ ಮಾನವ ಜೀವನದ ಪರಮೋಚ್ಚ ಗುರಿ ನಿಚ್ಚಳವಾಗಿ ಕಾಣುವ ಅವಸ್ಥೆಯುನ್ನು ಮುಟ್ಟಿದ ಅಲ್ಲಮ ದೇವಾಲಯುದಿಂದ, 'ಪೊರಮೊಟ್ಟನಲ್ಲಮಂ ಗೊಗ್ಗೇಶ್ವರಂ ಮೆಚ್ಚೆ'. ಮುಂದೆ ಅಲ್ಲಮ, ಶಿವಗರಬಡಿದವನಂತೆ ಪೋಗುತಿರ್ದಂ ಲಿಂಗವೆತ್ತತ್ತಲೊಯ್ದತ್ತ.

ಇಲ್ಲಿಂದ ಮುಂದಿನ ಘಟನೆಗಳ ಬಗ್ಗೆ ಪಂಡಿತರಲ್ಲಿ ಭಿನ್ನಾಭಿಪ್ರಾಯಗಳಿಲ್ಲ. ಆದರೆ, ಕಾಮಲತೆಯ ಪ್ರಸಂಗ ಮಾತ್ರ ಮುಂದಿನ ಕೆಲವು ಕೃತಿಕಾರರಿಗೆ ಸಮಸ್ಯೆಯಾಯಿತು. ಹರಿಹರನ ಕಾಮಲತೆಯ ಕಥಾಸರಣಿಯನ್ನು ಮೊದಲು ಪ್ರತಿಭಟಿಸಿದವನು ಚಾಮರಸ. ಅಲ್ಲಮನು ನಿರ್ಮಾಯನೆಂಬುದನ್ನು ನೆರೆ ನಂಬಿ, ಅದನ್ನೇ ಸ್ಥಾಪಿಸುವ ಪ್ರಯಾಸಪಟ್ಟವರಲ್ಲಿ ಚಾಮರಸ ಮೊದಲಿಗ. ಅವನು ಹರಿಹರನನ್ನು ವಾಚ್ಯವಾಗಿ ಖಂಡಿಸಿಲ್ಲವಾದರೂ, ಕಾಮಲತೆಯ ಪ್ರಸಂಗ ವನ್ನು ಸೂಚ್ಯವಾಗಿ ತೋರಿಸಿಕೊಡುತ್ತ ಅದರ ಮೇಲೆ ಧಾಳಿ ಮಾಡಿದ್ದು ಹೀಗೆ:

ಲಲಿತ ನಿರ್ಮಲ ಚಂದ್ರಕಾಂತದ
ಶಿಲೆಯ ಹತ್ತಿರೆ ಲತೆಯ ದಾವಾ
ನಳನು ಕೊಳಲಾ ಜ್ವಾಲೆಯಾ ಶಿಲೆಯೊಳಗೆ ತೋರ್ಪಂತೆ
ತಿಳಿಯಲಱಿಯದ ಜನಕೆ ಮಾಯೆಯ
ತಳಿತ ಕಾಮಜ್ವಾಲೆಯಲ್ಲಮ
ನೊಳಗೆ ಪ್ರತಿಬಿಂಬಿಸಿದುದಾತನೆ ಕಾವಿಯೆಂಬಂತೆ [೧೩]

---

ಪ್ರಭುಲಿಂಗಲೀಲೆಯಲ್ಲಿ ಅಲ್ಲಮನನ್ನು ಕುರಿತು ಕೆಲವು ಪೂರಕ ವಿವರಗಳನ್ನು ನೋಡಬಹುದು. ನಾಗವಾಸನ ಅಧಿಪತಿಗೆ ಮಗನಾಗಿ ಹುಟ್ಟಿದ ಅಲ್ಲಮ. ಇದೇ ಸಮಯದಲ್ಲಿ ಅಲ್ಲಮನ ಊರು, ಅವನ ತಂದೆ ತಾಯಿ, ಅವರ ಉದ್ಯೋಗ ಇವುಗಳ ಸಂಬಂಧವಾಗಿ ಒಂದೆರಡು ಮಾತನ್ನು ಹೇಳಬಹುದು. ಅಲ್ಲಮನು ಹುಟ್ಟಿದ ಬಳ್ಳಿಗಾವಿಯನ್ನು ಪ್ರಭುಲಿಂಗಲೀಲೆಯಲ್ಲಿ ಬನವಸೆಬಳ್ಳಿಗಾವಿ ಎಂದು ಕರೆಯಲಾಗಿದೆ. ಚಾಮರಸನ ಕಾಲಕ್ಕೆ ಬಳ್ಳಿಗಾವಿ ಎಂಬ ಹೆಸರಿನ ಊರುಗಳು ಆನೇಕವಿದ್ದುದರಿಂದಲೂ, ಅಲ್ಲಮನ ಹುಟ್ಟಿದೂರಾದ ಈ ಬಳ್ಳಿಗಾವಿಯು ಬನವಾಸಿಗೆ ಹತ್ತಿರವಿದ್ದುದರಿಂದಲೂ ಅದನ್ನವನು ಬನವಸೆಬಳ್ಳಿಗಾವಿ ಎಂದು ಕರೆದಿರುವುದು ಅರ್ಥವತ್ತಾಗಿದೆ. [೧೪] ಅಲ್ಲಮನ ತಂದೆತಾಯಿಗಳ ಹೆಸರನ್ನು ಹರಿಹರನು ಹೇಳದೇ ಇರುವ ಕಾರಣದಿಂದ ನಿರಂಕಾರ ಮತ್ತು ಸುಜ್ಞಾನದೇವಿ ಎಂಬ ಅವರ ಹೆಸರುಗಳು ಚಾಮರಸನ ಕಲ್ಪನಾವಿಲಾಸವೆಂದು ಯಾರೂ ಮೂಗು ಮುರಿಯುವ ಪ್ರಮೇಯವಿಲ್ಲ.

ಗೊಗ್ಗೇಶ್ವರ ಪ್ರಸಾದದ ಬೆಣ್ಣೆಯಂತಂದು
ಹಿಗ್ಗುತ್ತಲಿಕ್ಕಿ ದರ್ಜನನಿ ಮೆಲ್ಲ್ಲ ಎಂದು
ನಾಮಕರಣಂ ಜಗಕ್ಕಲ್ಲಯ್ಯನೆಂದಾಗೆ [೧೫]
.......................................................
ಕಾವಂಗೆ ಸಿಂಗರದ ಹುರಡು ಹುಟ್ಟುತ್ತಮಿರೆ,
ನನಗಣೆಯ ಬಿಲ್ಲ ಹಂಗಿಲ್ಲದಂಗಜನೆನಿಪ
ವನಿತೆಯರ ಮನವನಿಕ್ಕುಳಿಗೊಳ್ವನಿವನೆನಿಪ [೧೬]

ಚಲುವನಾಗಿ, ಅಂದರೆ, ಮನ್ಮಥನಿಗೆ ಪ್ರತಿ ಸ್ಪರ್ಧಿಯೆಂಬಂತೆ ನನೆಯಂಬು ಬಿಲ್ಲುಗಳ ಗೋಪವೆಯಿಲ್ಲದ, ಯುವತಿಯರ ಹೃದಯವನ್ನು ಇಬ್ಭಾಗ ಆಗುವಂತೆ ಮಾಡಿಬಿಡುವ ಅಭಿನವ ಕಾಮ ರೂಪಿಯಾಗಿ ಅಲ್ಲಮ ಬೆಳೆಯುತ್ತಾನೆ. ವಾಡಿಕೆಯಂತೆ, ಒಂದು ದಿನ ಅವನು ಆ ಊರಿನ ಗೊಗ್ಗೇಶ್ವರನ ಗುಡಿಗೆ ಹೋಗಿ ತನ್ನ ಮೃದಂಗ ಸೇವೆಯನ್ನು ಸಲ್ಲಿಸುತ್ತಿರುತ್ತಾನೆ. ಆಗ ಆ ಪುರದ ಧನದತ್ತನ ಮಗಳು ಕಾಮಲತೆ, ಈಶ್ವರನ ಸೇವೆಯ ನಾಮವಿಡುದು, ಆ ದೇವಾಲಯಕ್ಕೆ ಬರುತ್ತಾಳೆ. ಅಲ್ಲಿಯೇ ಪರಸ್ಪರರಲ್ಲಿ ಪ್ರೇಮ ಅಂಕುರಿಸುತ್ತದೆ. ಕೂಡಲೆ ಸಖಿಯರೆಲ್ಲರು ಸೇರಿ ಅಲ್ಲಮ ಕಾಮಲತೆಯರನ್ನು ಸಜ್ಜೆ ಮನೆಗೆ ಸೇರಿಸುತ್ತಾರೆ. ಅಲ್ಲಿ ಅಲ್ಲಮ ಕಾಮಲತೆಯರ ಪ್ರಣಯ ಜೀವನ ಪ್ರಾರಂಭವಾಗುತ್ತದೆ. "ಏರುಂಜವ್ವನ ಕಡುಬೆಡಗಿ ಕಾಮಲತೆ, ರೂಪಿನೊಳು ರತಿಗೆ ಮಿಗಿಲಾಗಿದ್ದಳು. ಸೊಬಗಿನ ಸೊಂಪನೊಳಕೊಂಡು" – ಶಿವನ ದರ್ಶನಕ್ಕೆ ಆಗಮಿಸುತ್ತಾಳೆ. ಅಲ್ಲಿ ಅಲ್ಲಯ್ಯನ ಮೃದಂಗದ ಕೇಳಿಯತ್ತ ಕಿವಿಯಾದಳು, ಅವನನ್ನು ಕಂಡು ಕಣ್ ಸೋತಳು. ಇಬ್ಬರ ದೃಷ್ಟಿಗಳೂ ಸಂಗಮಿಸಿದವು – ಎಂದು ಹರಿಹರ ಚಿತ್ರಿಸಿದ್ದಾನೆ. ಇದೇ ಪ್ರಸಂಗವನ್ನು ಚಾಮರಸ ಭಿನ್ನವಾಗಿ ಚಿತ್ರಿಸುತ್ತಾನೆ.

ಬೆಳೆದ ಮಾಯೆಗೆ ನವಯೌವನ ಬಂದಿತ್ತು, ಅತ್ತ ಅಲ್ಲಮನಿಗೂ ಹರೆಯ ಬಂದಿತ್ತು. "ಧರಣಿಯೊಳು ಚೆಲುವಿಂಗೆ ತಾನೇ ಬಿರುದ ಕಟ್ಟಿದನೆಂಬ ಸೊಬಗಿನ" ಅಲ್ಲಮ ಮಾಯಾ ಕೋಳಾಹಲ ನೆನಿಸಲೆಂದೇ ಹುಟ್ಟಿದವ. ಆತನ ಸತ್ವಪರೀಕ್ಷೆಯ ಆ ಗಳಿಗೆ ಬಂದೇ ಬಿಟ್ಟಿತು.

---

ಒಮ್ಮೆ ಮಾಯೆ ಮಧುಕೇಶ್ವರನ ಪೂಜೆ ಮಾಡಿ, ಸಂಗೀತ ಸೇವೆಯನ್ನು ಸಲ್ಲಿಸಿ ರಂಗಪ್ರವೇಶ ಮಾಡಿ ನೃತ್ಯವನ್ನಾರಂಭಿಸಿದಳು :

ಬಳಿಕಲೊಯ್ಯನೆ ಚರಣ ಚಾರಣ
ಚಳತೆಯಲಿ ನಿಜಹಸ್ತವಿಸ್ತರ
ದಳತೆಯಲಿ ಝಳಪಿಸುವ ಬೆರಳಿನ ಉಳಿಯ ಹವಣಿನಲಿ
ಘಲಿಘಲಿಸುವಂದುಗೆಯ ಕಂಕಣ
ಗಳ ಝಣತ್ಕಾರದಲಿ ಮಾಯಾ
ಲಲನೆ ರಂಗಂಬೊಕ್ಕುನಿಂದಳು ನಿಜದ ನಿಜುಗೆಯಲಿ ೧೭

ತಾಳದಲಿ ತರಹರಿಸಿ ಮೆಲ್ಲನೆ
ಮೇಳದಲಿ ಮೈನಿಗುರಿ ಕರಸಂ
ಚಾಳಿಯಲಿ ಚಳಬಳಸಿ ತಿರುಪಿನ ಮಡುಪಿನಲಿ ಮಣಿದು
ತೋಳ ಮೈಯಲಿ ತೊನೆದ ನೋಟದ
ಥಾಳದಲಿ ಧವಳಿಸಿಯೆ ವಿನುತ ಮ
ರಾಳಗತಿಯಲಿ ಗಮಕಿಸುತುವೊಪ್ಪಿರ್ದಳಾ ಮಾಯೆ ೧೮

ಹೀಗೆ ತನ್ನ ನೃತ್ಯ ವೈಭವದಲ್ಲಿ ಮಾಯೆ ಮೆರಗು ನೀಡುತ್ತಿದ್ದಳು.

ಆ ಶ್ಯಾಮೆ ಮಾಯಾದೇವಿ, ಕಾಮನಿಯೋ, ತಾ ಭರತಸಂಭವ ಭೂಮಿಯೋ , ಎಂಬಂತೆ ಮೋಹಿನಿಯ ಪಾತ್ರವಾಡಿದಳು. ಆಗ, ಸಂಗಿಯಂತಿರೆ ನಟಿಸಿ ತಾ ನಿಸ್ಸಂಗಿಯಾಗಿಹ ಪರಿಯನು ಆ ನೃತ್ಯಾಂಗನೆಗೆ ತಿಳಿಸಲೆಂದು ಬಂದನಲ್ಲಿಗೆ ಅಲ್ಲಮಪ್ರಭು.

"ಕಂಗಳಿಂ ನಡೆ ನೋಡಿದೊಡೆ, ಹೆರೆಹಿಂಗಬಾರದ ಚೆಲುವ ಮುಖದ, ಸುರಂಗ ಸೂಸುವ ದಂತಪಂಕ್ತಿಯ ತೊಳಪ ಕಣ್ಣುಗಳ, ಕೋಮಳದ ಸರ್ವಾಂಗಭಂಗಿಯ" ಸೌಮ್ಯತೆಯನ್ನು ಧರಿಸಿ ಬಂದನವನು. ನಾನಾ ಪರಿಯ ವಹಣಿಗಳಿಂದ, ತಾಳ ಸಮೇಳ ಸದ್ಗತಿಯಿಂದ ಉಗ್ಘಡಣೆಯ ಗಡಾವನೆಯಿಂದ, ಕೇಳುವವರು ಬೆರಗಾಗೆ ಅಲ್ಲಮ ಹಲವಂದದಲಿ ಮದ್ದಳೆಯ ಬಾರಿಸಿದನು .

೨. ಅನಿಮಿಷ ಯೋಗಿಯ ಭೇಟಿ :

ಸಿದ್ಧನೂ ಪರಿಪೂರ್ಣ ಜ್ಞಾನಿಯೂ ಆಗಿ ಚಿತ್ರಿತನಾದ ಪ್ರಭುವು ಅನಿಮಿಷನನ್ನು ಗುರುವಾಗಿ ಸ್ವೀಕರಿಸುವುದು ಚಾಮರಸನ ಸೃಷ್ಟಿಗೆ ಒಪ್ಪಿಗೆಯಾಗದು. ಅದನ್ನು ಒಪ್ಪದ ಅವನ ಮನ–ಬುದ್ಧಿಗಳು ನರನು ತಾ ದಿಟವೆಂಬ ಬಳಕೆಯ ಪರಿಯನಂಗೀಕರಿಸಿ ಪರರಿಗೆ ಪರಮನಲ್ಲಮ ನಟಿಸುತಿರ್ದನು ತನ್ನ ಲೀಲೆಯಲಿ ಹರಿಹರ ಕವಿಯು ಚಿತ್ರಿಸಿರುವ ಅನಿಮಿಷ ಯೋಗಿಯ ವರ್ಣನೆ ತುಂಬಾ ಸುಂದರವಾಗಿ ರಗಳೆಯಲ್ಲಿ ಮೂಡಿಬಂದಿದೆ. ಅಲ್ಲಮ ದೇವಾಲಯವನ್ನು ಹೊಕ್ಕಾಗ ಕಂಡ ಚಿತ್ರಣ ಈ ರೀತಿ ಇದೆ.

ಬತ್ತಿಯಿಲ್ಲೆಣ್ಣೆಯಿಲ್ಲದೆ ದೀಪ್ತಿ ಬೆಳಬೆಳಗೆ
ಸುತ್ತಲುಂ ಶಿವಕಳೆಯ ತಂಬೆಳಗು ತೊಳತೊಳಗೆ

ತಿಳಿದ ನಿರ್ಮಲ ಜಳದ ಘನದ ಬೆಳಗೆಂತಂತೆ
ಕೀಲಿಸಿದ ಪದ್ಮಾಸನಂ ಪುಲಿದೊವಲ್ತನುವ
ನಾಲಿಂಗಿಸಿದ ಭಸಿತವಮಳಸೂತ್ರಂ ಮೆರೆವ
ಬೆಳಪ ಕಣ್ ಸುಲಿಪಲ್ಲು ಹೊಳೆವ ಮುಖ ಮಂಡಲಂ
ಇಳಿದ ಜಡೆ ರುದ್ರಾಕ್ಷಿಮಾಲೆ ಮಣಿಕುಂಡಲಂ
ಕಯ್ಯ ಶಿವಲಿಂಗದೊಳು ನಟ್ಟ ನೋಟಂ ಮೆ ಱೆಯೆ
ಮೆಯ್ಯ ಕೋಮಳತೆ ನಳನಳಿಸಿ ನಯಮಂ ಕರೆಯೆ [೧೯]

ಎಂದು ವರ್ಣಿಸಿಕೊಂಡು ಹೋಗಿದ್ದಾನೆ. ಅಪ್ರಯತ್ನಪೂರ್ವಕವಾಗಿ ಹೊರಹೊಮ್ಮಿದ ಸಹಜ ಸೌಂದರ್ಯದಿಂದ ಕೂಡಿದೆ, ಈ ಚಿತ್ರ. ಅನಿಮಿಷನಿಂದ ಅನುಗ್ರಹೀತನಾಗಿ ಸಿದ್ಧನಾದ ಅಲ್ಲಮನ ಪೂಜೆಯ ವರ್ಣನೆ ಒಂದು ಕಡೆ ಬರುತ್ತದೆ. ಅಲ್ಲಿಯೂ ಹರಿಹರ ತನ್ನ ಶಕ್ತಿಯನ್ನು ಪ್ರಕಟಪಡಿಸಿದ್ದಾನೆ.

ಇರುತೆ ಲಿಂಗಕ್ಕೆ ನೋಟದೊಳೆ ಮಜ್ಜನಕ್ಕೆಱೆದು
ಅರಲ್ದಕ್ಷಿಯೆಂಬ ಹೂವಿಂದೆ ಪೂಜೆಯ ಮೆರೆದು
ನಱುಸುಯ್ಯ ಕಂಪಿಂದೆ ನವಧೂಪಮಂ ಕೊಟ್ಟು
ನೆಱೆಮನದ ಬೆಳಗಿನಾರತಿಯೆತ್ತಿ ಪೊಡಮಟ್ಟು
ನಿಟ್ಟೆಯಿಂ ನೇಹಮುಮನಾರೋಗಿಸಲ್ ಕೊಟ್ಟು
ಕಟ್ಟಳ್ಳಱಚಲಿತಾನಂದಮಂ ಮುಂದಿಟ್ಟು
ಸಕಳಸುಖಮಂ ಕಣ್ಗಳಿಂದೆ ಕೈಗೂಡುತುಂ
ಸಕಳಭೋಗಂಗಳಂ ನೋಟದಿಂ ನೀಡುತುಂ [೨೦]

ಹೀಗೆ ಅಲ್ಲಯ್ಯನ ಪೂಜೆ ಜ್ಞಾನಮಾರ್ಗದಲ್ಲಿ ನಡೆಯುತ್ತದೆಯೆಂದು ಅರ್ಥವತ್ತಾಗಿ ಸೂಚಿಸಿದ್ದಾನೆ. ಆಕಸ್ಮಿಕವಾಗಿ ಕಾಣಿಸಿಕೊಂಡ ದೇವಾಲಯವನ್ನು ಪ್ರವೇಶಿಸಲು ಎಲ್ಲರೂ ಹಿಂಜರಿದಾಗ ಅತಿಯಾದ ವಿರಕ್ತಿ ಹೊಂದಿದ್ದ ಅಲ್ಲಮ ಆ ಕೆಲಸಕ್ಕೆ ಮುಂದಾಗುತ್ತಾನೆ. ಅದೇ ಅವನ ಜೀವನಕ್ಕೆ ಒಂದು ತಿರುವಾಗುತ್ತದೆ

ಬೆರಲಿಲ್ಲ ಕಿವಿಯಿಲ್ಲ ಮುಡುಹು ಮುಂದಲೆಯಿಲ್ಲ
ಉರವಿಲ್ಲ ಮೂಗಿಲ್ಲ ಸತಿ ಕಾಮಲತೆಯಿಲ್ಲ [೨೧]

ಇನ್ನೇಕೆ ತಾನು ಬದುಕಿರಬೇಕು ಎಂದು ನಿರ್ಧರಿಸಿ ದೇವಾಲಯದೊಳಗೆ ಪ್ರವೇಶಿಸಲು ಮುಂದಾಗುವನು. ಆಗ ಬದುಕಿಗೆ ವಿದಾಯ ಹೇಳ ಹೊರಟ ಅಲ್ಲಮನಿಗೆ ಅಲ್ಲಿ ಶಿವನ ದರ್ಶನವಾಗುತ್ತದೆ. 'ಅಂಗೈಯೊಳಗಮೃತ ಫಳಮಂ' ಪಡೆದ ಅಲ್ಲಮನಿಗೆ ಪರಮಜ್ಞಾನ ಉದಯಿಸುತ್ತದೆ. ದೇಹಾದಿ ಕರಣಗಳನ್ನು ಮೀರಿ ಪರಬ್ರಹ್ಮನಾಗುತ್ತಾನೆ. ಹರಿಹರ ಕವಿಯಂತೆಯೇ ಚಾಮರಸನು ಸುದೀರ್ಘವಾಗಿ ಗೊಗ್ಗಯ್ಯನ ಪ್ರಸಂಗವನ್ನು ಮುಂದುವರಿಸಿದ್ದಾನೆ.

### ೩. ಗೋರಕ್ಷನ ಭೇಟಿ :

ಕಲ್ಯಾಣದ ತನ್ನ ವಾಸ್ತವ್ಯದಲ್ಲಿ ಅಲ್ಲಮ ಅನುಭವ ಮಂಟಪದ ಒಳಗೆ ಹಾಗೂ ಹೊರಗೆ ಶರಣರಿಗೆ ನಿಜದ ನೆಲೆಯನ್ನು ಆರುಹುತ್ತಿದ್ದ. ಗೋರಕ್ಷ ಕಾಪಾಲ ಮಾರ್ಗದ ಸಾಧಕ. ಶ್ರೀಗಿರಿಯಲ್ಲಿ ನೆಲಸಿ ತಾಂತ್ರಿಕ ಸಾಧನೆಗಳಿಂದ ದೇಹವನ್ನು ವಜ್ರದಂತೆ ತೋರಿಸಿಕೊಳ್ಳುತ್ತಾನೆ. ಬಾಹ್ಯ ಸಾಧನೆಗಳಲ್ಲಿ ಹುರುಳಿಲ್ಲವೆನ್ನುವುದನ್ನು ತೋರಿಸಲು ಈ ಬಗೆಯ ಪ್ರಸಂಗವೊಂದನ್ನು ಕವಿ ಸೇರಿಸಿರುವಂತ್ತಿದೆ. ತಾನೆ ಗೋರಕ್ಷಕನಲ್ಲಿಗೆ ಹೋದ ಅಲ್ಲಮನ ಪರಿ, ರೋಗಿಯಲ್ಲಿಗೆ ಅಮೃತವೇ ಹೋದಂತಿತ್ತು. ಇನ್ನಾದರೂ ಈತನ ಬೆಡಗನ್ನು ಹಾಗೂ ಸಿದ್ಧತನವನ್ನು ತಾನು ನೋಡಬೇಕು. ಸಾಧಕರಿಗೆ ಇದೇ ಮಹಾನವಮಿ–ಎಂದೆನ್ನುತ ಗೋರಕ್ಷಕ ತನ್ನ ಸಾಮರ್ಥ್ಯವನ್ನೆಲ್ಲ ಬಳಸಿ ಖಡ್ಗವನ್ನು ಅಲ್ಲಮನ ದೇಹದ ಮೇಲೆ ಪ್ರಹರಿಸಿದಾಗ, ಅದು ಪ್ರಭುವಿನ ಬಯಲ ದೇಹದಲ್ಲಿ ಈಸಾಡಿತು. ಇದೇನು ಆಶ್ಚರ್ಯ? ನಿಜವಾಗಿಯೂ ಈತನೇ ತನ್ನ ಗುರು ಇರಬೇಕೆಂದಿನಿಸಿತು ಗೋರಕ್ಷಕನಿಗೆ.

ಕಾಯ ಬಲಿದರೆಮಾಯೆ ಬಲಿವುದು
ಮಾಯೆ ಬಲಿದರೆ ಛಾಯೆ ಬಲಿವುದು
ಕಾಯ ಮಾಯಾ ಛಾಯೆ ಬಲಿದರೆ ಸಿದ್ಧತನವಲ್ಲ
ಕಾಯ ಮಾಯಾ ಛಾಯದಾಗಿನ
ದಾಯವನು ಕಳೆದುಳಿದನಾದೊಡೆ
ರಾಯನಾತನು ಸಿದ್ಧರಲಿ ಗೋರಕ್ಷ ಕೇಳೆಂದ [೨೨]

ಅಲ್ಲಮನ ಮಹಿಮೆಯ ನಿಜ ಸ್ವರೂಪವನ್ನು ತಿಳಿದ ಮೇಲೆ ಗೋರಕ್ಷಕ ಶರಣಾದ. ಹದಕ್ಕೆ ಬಂದ ಮನಸ್ಸನ್ನು ಕೂಡಲೆ ಪಾಕಗೊಳಿಸಬೇಕೆಂದು ಅಲ್ಲಮನೂ ಅವನಿಗೆ ಅನುಗ್ರಹಿಸಿ ಉಪದೇಶಿಸಿದ. ಹೀಗೆ ನಿರ್ದೇಹಿಯಾಗುವ ಮರ್ಮವನ್ನು ನನಗೆ ತಿಳಿಸೆಂದು ಬೇಡಿಕೊಳ್ಳಲು, "ಬಿಸಿಯ ಹದನನು ತಿಳಿದು ಲೋಹವ ಬೆಸುವವೊಲು ಪರಿಪಾಕ ಭಾವದ ಹಸನನಱಿದು" ಅಲ್ಲಮಪ್ರಭು ಆತನಿಗೆ ವೀರಶೈವೋಪದೇಶವನ್ನು ಮಾಡಿದನು. [೨೩] ಆದರೆ ಈ ಪ್ರಸಂಗ ಹರಿಹರನ ಪ್ರಭುದೇವರ ರಗಳೆಯಲ್ಲಿ ಬರುವುದಿಲ್ಲ.

### ೪. ಬಸವಣ್ಣನವರ ಭೇಟಿ :

ಬರುತೆ ಬಸವಣ್ಣನಂ ಕಂಡು ಮಾತಾಡುತಂ
ಹರನ ನಿಲವಿನ ಪರಿಯನೊಲ್ಮೆಯಿಂ ತೋಱುತಂ
ನಡೆತಂದು ಚನ್ನ ಸೊನ್ನಲಿಗೆಯ ಪುರಕೆ ಬಂದು
ಮೃಡಮೂರ್ತಿ ಸಿದ್ಧರಾಮನ ಸಾರ್ಗೆನಡೆತಂದು [೨೪]

ಈ ಸಂದರ್ಭದಲ್ಲಿ ಅಲ್ಲಮ ಮತ್ತು ಬಸವಣ್ಣನವರ ನಡುವೆ ನಡೆದಿರಬಹುದಾದ ಕೆಲಸ ಕಾರ್ಯಗಳ ಬಗೆಗೆ ಹರಿಹರ ಏನನ್ನೂ ಪ್ರಸ್ತಾಪ ಮಾಡುವುದಿಲ್ಲ. ಹರಿಹರನ ರಗಳೆಯಲ್ಲಿ ಗೊಗ್ಗಯ್ಯ, ಮುಕ್ತಾಯಕ್ಕ, ಗೋರಕ್ಷಕ ಮುಂತಾದ ಸಾಧಕರನ್ನೂ ಅಲ್ಲಮನು ಸಂದರ್ಶಿಸಿದ ಉಲ್ಲೇಖ ಕೂಡ ಇಲ್ಲ. ಪ್ರಭುಲಿಂಗಲೀಲೆ, ಶೂನ್ಯ ಸಂಪಾದನೆಗಳಲ್ಲಿ ಮೈವೆತ್ತು ನಿಂತಿರುವ

ಅನುಭವಗೋಷ್ಠಿಯ ಸೊಗಸಿನ ಒಂದು ಇಣುಕು ನೋಟ ಕೂಡ ನಮಗಿಲ್ಲಿ ದೊರೆಯುವುದಿಲ್ಲ. ಇಷ್ಟೆಲ್ಲ ಸಂಗತಿಗಳ ಕೊರತೆಯಿದ್ದರೂ ಉತ್ತರಾರ್ಧದ ಕಥೆಯಲ್ಲಿ ಅಲ್ಲಮನ ಮಹೋನ್ನತ ವ್ಯಕ್ತಿತ್ವದ ಪ್ರಭೆ ಕ್ಷಣಕಾಲದ ಮಟ್ಟಿಗಾದರೂ ವಾಚಕರ ಕಣ್ಣನ್ನು ಕೋರೈಸುವಂತಹ ಪವಾಡವನ್ನು ಸಾಧಿಸಿದೆಯೆನ್ನಬೇಕು. ಈ ಭಾಗದ ಚರಿತ್ರೆಯನ್ನೋದುವವರು ಪ್ರಭುದೇವರ ವಚನಗಳು, ಚಾಮರಸನ ಕಾವ್ಯ, ಮತ್ತು ಶೂನ್ಯ ಸಂಪಾದನೆಗಳಲ್ಲಿ ಮೂಡಿ ನಿಂತಿರುವ ಮೂರ್ತಿ ಚಿತ್ರದ ಪ್ರಭೆಯನ್ನೆ ಕಾಣುವರೆಂಬುದರಲ್ಲಿ ಸಂದೇಹವಿಲ್ಲ.

ಕಾಳಗವು ಕರಣದಲಿ ಸುರತದ
ಕೀಲು ಕುಂಡಲಿಯಲ್ಲಿ ತೃಪ್ತಿಯ
ದಾಳಿ ಗಗನದೊಳೆಂದು ಪೇಳುವುದೀ ಸುಬೋಧೆಯಲಿ [೨೫]

ಚಾಮರಸನು ಪ್ರಭುಲಿಂಗಲೀಲೆಯಲ್ಲಿ ಅಲ್ಲಮಪ್ರಭುದೇವನ ಪರಮ ಬೋಧೆಯನ್ನು ಮೂರು ಭಾಗಗಳಲ್ಲಿ ನಿರೂಪಿಸಿದ್ದಾನೆ. ಇಷ್ಟಲಿಂಗ, ಸಾಧಕಾಂಗ, ಹಾಗೂ ಮನೋಲಯ. ಇಷ್ಟಲಿಂಗ ಬೋಧೆಯಲ್ಲಿ, ಹೆಸರೇ ಸೂಚಿಸುವಂತೆ, ಇಷ್ಟಲಿಂಗ, ಅದರ ಪೂಜೆ, ಪೂಜೆಯ ರೀತಿ ಹಾಗೂ ಅದರ ಮರ್ಮವನ್ನು ಉಪದೇಶಿಸಲಾಗಿದೆ. ಸಾಧಕಾಂಗದಲ್ಲಿ, ಯೋಗಮಾರ್ಗದ ಸಾಧಕನಿಗೆ ಮಾರ್ಗದರ್ಶನ ನೀಡಲಾಗಿದೆ ಹಾಗೂ ಮನೋಲಯ ಬೋಧೆಯಲ್ಲಿ ಚಂಚಲ ಮನವನ್ನು ಲಯಗೊಳಿಸುವ ಸೂಕ್ಷ್ಮಾತಿಸೂಕ್ಷ್ಮ ವಿಶ್ಲೇಷಣೆ ಇದೆ. ಅಲ್ಲಮಪ್ರಭುವಿನ ಪರಮಬೋಧೆಯನ್ನು ಪಡೆದವರು ಕಲ್ಯಾಣದ ಬಸವಣ್ಣ ಮುಂತಾದ ಭಕ್ತವೃಂದ.

೫. ಅಜಗಣ್ಣನ ಭೇಟಿ :

ಭಕ್ತರ ಪಾವನವ ಮಾಡಲಿಕ್ಕೆ ಸಂಚರಿಸುತ್ತಲ್ಲಿದ್ದ ಅಲ್ಲಮನಿಗೆ ಅಡಕ (ಇಂದಿನ ಲಕ್ಕುಂಡಿ) ಎಂಬ ಗ್ರಾಮ ಎದುರಾಗುತ್ತದೆ. ಅಲ್ಲಿದ್ದ ಗುಪ್ತ ಭಕ್ತಿಯ ಶರಣ ಅಜಗಣ್ಣ ಮಹಾಬಯಲು ಬೆರೆಸಿದ್ದ. ಅಲ್ಲಿಗೆ ಹತ್ತಿರದಲ್ಲಿದ್ದ ಮಸಳಿ ಕಲ್ಲು ಗ್ರಾಮದಿಂದ ಬಂದ ಆತನ ತಂಗಿ ಮುಕ್ತಾಯಕ್ಕ ಅಣ್ಣನ ಅಗಲಿಕೆಯನ್ನು ಭರಿಸದಂತಾಗಿ ಪರಿಪರಿಯಾಗಿ ಪ್ರಲಾಪಿಸುತ್ತಿರುತ್ತಾಳೆ. ಆಕೆಗೆ ಅಜಗಣ್ಣ ಕೇವಲ ಅಣ್ಣನಾಗಿರದೆ ಗುರುವೂ ಆಗಿದ್ದ. ಆದ್ದರಿಂದ ದಾರಿ ಕಾಣದಂತಾಗಿದ್ದ ಆಕೆಯ ಮನದಳಲು ಅಬ್ಬರಿಸಿದಾಗ ಅದು ಅಲ್ಲಮನ ಕರುಳನ್ನು ಕರಗಿಸುತ್ತದೆ. ಆಕೆಗೆ "ಸಲ್ಲಲಿತ ಲಿಂಗಾನುಭಾವದ ಬೆಲ್ಲವನು ಮೆಲಕಲಿಸಿ ನಿಜ ಸುಖದಲ್ಲಿ ನಿಲಿಸುವೆನೆನುತ". ಅಲ್ಲಮ ಪ್ರಭು ಆಕೆಯ ಬಳಿಗೆ ಸುಳಿದ. ಮುಕ್ತಾಯಕ್ಕನ ವಿಲಾಪಕ್ಕೆ ಎಲ್ಲೆ ಇರಲಿಲ್ಲ.

ನಾನೆಂತು ಬದುಕುವೆನಣ್ಣ
ಕತ್ತಲೆ ಬೆಳಗ ಕಾಲ ಸಂದೇಹಿ ನಾನೊಬ್ಬಳು

ಎಂದು ಹಲುಬುತ್ತಿದ್ದಳು ಮುಕ್ತಾಯಕ್ಕ ಆಕೆಗೆ ಅಲ್ಲಮ ಬದುಕುವುದೆಂತು ಎಂಬುದನ್ನು ತಿಳಿಸಿದ ಈ ಪ್ರಸಂಗದಲ್ಲಿ ತತ್ವಾರ್ಥ ಬೋಧನೆ ಲಿಂಗಾನುಭವ ದರ್ಶನ ಹಾಗೂ ವಾದ ಪ್ರತಿವಾದ ರಂಜನೆ ಇದೆ.

ಅಲ್ಲಮನೆ ಮಾತಿಗೆ ಮೊದಲು ಮಾಡುತ್ತಾನೆ. ಅಂಗೈಯೊಳಗೊಂದು ಅರಳ್ದ ತಲೆಯ

ಹಿಡಿದುಕೊಂಡು ಕಂಗಳಲ್ಲಿ ಮುತ್ತು ಪವಣಿಸುವಾಕೆ ನೀನಾಗು ಹೇಳಾ! ಅರಿವಿನೊಳಗಣ ಮರಹಿದೇನು ಹೇಳಾ?

ಸಾಧನೆಯ ಶಿಖರವನ್ನೇರಿದ್ದ ಶರಣೆ ಮುಕ್ತಾಯಕ್ಕ ಉತ್ತರ ನೀಡುತ್ತಾಳೆ. ಆಗ ಅಲ್ಲಮ ಪ್ರಭು ಆಕೆಯಲ್ಲಿದ್ದ ಪರಂಜ್ಯೋತಿತ್ವವನ್ನೂ ಮನಸಾರೆ ಒಪ್ಪಿಕೊಳ್ಳುತ್ತಾನೆ.

ದೇವ ನಿಮ್ಮವರುಗಳ ಪರಿಯನು
ನೀವೆ ಬಲ್ಲಿರಿ ಹಾವಿನಡಿಯನು
ಹಾವುಗಳು ನೆರೆ ಬಲ್ಲುವಲ್ಲದೆ ನಮಗೆ ಗೋಚರವೆ
ಭಾವಿಸುವೊಡೆಮಗಿನ್ನು ಗತಿಮತಿ
ಯಾವುದೆಂದನುತಲ್ಲಮಪ್ರಭು
ದೇವರಿಗೆ ಮುಕ್ತಾಯಿ ಬಿನ್ನೈಸಿದಳು ಭಕ್ತಿಯಲಿ ೨೬

ಹೀಗೆ ಅಲ್ಲಮ ಪ್ರಭುವಿಗೆ ಭಕ್ತಿಯಿಂದ ಭಿನ್ನವಿಸಿದಳು. ಆಕೆಯ ಭಿನ್ನಹಕ್ಕೆ ಪ್ರೀತನಾದ ಅಲ್ಲಮ ಅಕ್ಕ ಕೇಳಾ, ನಿನ್ನ ಹೆಸರಿಗೆ ತಕ್ಕ ಬಯಕೆಯ ನೀನು ಬಯಸಿದೆ ಎಂದು ತನ್ನ ಮೆಚ್ಚುಗೆ ಸೂಚಿಸಿ ಬಳಿಕ ಹೀಗೆ ಬೋಧಿಸಿದ :

ಹರುಗೋಲನ ಜೋಗೈಸಿಕೊಳುತಲಿ
ತೊರೆಯ ದಾಂಟುವರಂತೆ ಲಿಂಗವ
ನಱಿವವರು ಕರ್ಮೇಂದ್ರಿಯಗಳನೊಯ್ಯನೋಸರಿಸಿ
ಹೊರಗೆ ಮಾಡುವ ಮಾಟವೆಲ್ಲವ
ತೊರೆವುದೆಂತಮಾರ್ಗವೊಂದನೆ
ಹೊರುವುದಿದು ಶಿವಭಕ್ತಿಯೌ ಮುಕ್ತಾಯಿ ಕೇಳೆಂದ ೨೭

ಹರಿಗೋಲನ್ನು ಆಶ್ರಯಿಸಿ ತೊರೆಯನ್ನು ದಾಟುವವರಂತೆ ಲಿಂಗವನ್ನರಿಯ ಬೇಕೆನ್ನುವವರು ಹೊರಗೆ ಮಾಡುವ ಮಾಟವೆಲ್ಲವ ತೊರೆದು ಅಂತರ್ ಮಾರ್ಗವೊಂದನ್ನೇ ಆಶ್ರಯಿಸಬೇಕು. ಇದು ಶಿವಭಕ್ತಿ.

ಜೀವ, ಅದಕ್ಕಾಶ್ರಯವಾದ ದೇಹ, ಅಲ್ಲಿರುವ ಮನಸ್ಸು, ಇವೆಲ್ಲ ಬಯಲು ಆಗುವುದೆಂತು –ಎಂದು ಮುಕ್ತಾಯಕ್ಕ ಮತ್ತೆ ಪ್ರಶ್ನಿಸುತ್ತಾಳೆ. ಆಗ ಅಲ್ಲಮ ತಾಯಿಗೆ ಅರ್ಥವಾಗುವಂತಹ ಉಪಮಾನದಿಂದ ಹೀಗೆ ಬೋಧಿಸುವನು.

ಕೇಳಿದೌ ಶಿಶುಗಳಿಗೆ ತಾಯ್ಮೊಲೆ
ವಾಲೆ ಜೀವನವಾದೆಡೆಯೂ ನೆರೆ
ಪಾಲನೆರೆವುತೆ ಮೆಲ್ಲ ಮೆಲ್ಲನೆಯಶನುವನು ಸವಿಸಿ
ಬಾಲಕರ ಪಟುಮಾಡಬಲ್ಲಸ

ಕೀಲಕರವೋಲ್ ಹೊರಗೆ ಮರೆದು ನಿ
ರಾಳದಲಿ ನಿಲಲರಿವುದೌ ಮುಕ್ತಾಯಿ ಕೇಳೆಂದ ೨೮

ಶಿಶುಗಳಿಗೆ ಮೊದಲು ತಾಯಿಯ ಹಾಲೇ ಜೀವನವೆನಿಸಿದರೂ ಸಹ, ಬರುಬರುತ್ತ ಹಸುವಿನ ಹಾಲನ್ನು ಆ ಮೇಲೆ ಮೆತ್ತನೆಯ ಅನ್ನವನ್ನು ಕೊಟ್ಟು ನಿರಾಳದಲ್ಲಿ ನಿಲ್ಲುವುದನ್ನು ಕಲಿಯಬೇಕು, ಆಗ ನಿತ್ಯಾನಂದ ನಿನ್ನದಾಗುತ್ತದೆ.

ಪರತತ್ವವ ನುಡಿದು ಹೇಳುವ ಗುರುವೆ, ನಿನಗಿನ್ನೂ ಮನೋ–ವಾಕ್–ಕಾಯ–ಕರ್ಮಗಳಿರುವಾಗ, ಇವೆಲ್ಲ ವಾಕ್ ಚಾತುರ್ಯ ಮಾತ್ರವಲ್ಲವೇ? ಎಂದು ಮುಕ್ತಾಯಕ್ಕ ಅಲ್ಲಮ್ಮನ ಅಂತರಂಗವನ್ನೇ ಬೆದಕುವ ಪ್ರಶ್ನೆ ಹಾಕುತ್ತಾಳೆ. ಅಲ್ಲಮ ಪ್ರಭು ಆತ್ಮೀಯತೆಯಿಂದ, ಅಹುದು ಮತ್ತೇನವ್ವ ಎಂದು ತಲೆದೂಗಿ ಹೀಗೆ ಹೇಳಿದ ನಿರ್ವಯಲು ವ್ಯಕ್ತವಾಗುವುದು ಮನೋವಾಕ್ಕಾಯ ಕರ್ಮಗಳ ಮೂಲಕವೇ. ಆದರೆ ಶರಣನ ಸ್ಥಿತಿ ಬೆಂದನುಲಿ ಅದು ಹಗ್ಗವೆಂಬತೆ ಕಂಡರೂ ಸಹ ನೆಯ್ಯುವರ ಕೆಲಸಕ್ಕೆ ಅದು ಬಂದುದುಂಟೇ? ಹಾಗೆಯೇ ಶರಣನು ಲಿಂಗಜ್ಞಾನವೆಂಬ ಬೆಂಕಿಯಲ್ಲಿ ಬೆಂದು ಹೋದ ದೇಹವುಳ್ಳವನು. ಅಜಗಣ್ಣ ಸಹ ಬೆಂದನುಲಿ ಬಯಲೊಡಲಿಗ ಆದ್ದರಿಂದ ಆಂಥ ಒಂದು ಇಲ್ಲದ ಬಯಲೊಡಲಿಗನಲ್ಲಿ ಇನ್ನೊಂದು ಕಲ್ಪಿಸಬಾರದು.

ಮುಕ್ತಾಯಕ್ಕ ವಿನಯದಿಂದ ಪ್ರಾರ್ಥಿಸಿದಳು ನಿರ್ವಯಲೊಡಲಿಗನು ನಿನಹುದು. ಅದು ನಿಜವಾಗಿದ್ದರೆ ನನಗೆ ವಿವೇಕ ವಿಚಾರಬೋಧೆಯನ್ನೂ ನುಡಿವ ಪರಿಯೆಂತಣ್ಣ? ಅದಕ್ಕೆ ಮನೋವಾಕ್ಕಾಯ ಕರ್ಮಗಳೇ ಬೇಕಲ್ಲವೇ? ಬಂದನುಲಿಗೆ ಅವೆಲ್ಲಿ? ನಿನ್ನ ಬೆಡಗ ನಾನರಿವಂತೆ ಹೇಳು. ಅಲ್ಲಮ ಪ್ರಭು ತಂಗಿ ಎಂದು ಆತ್ಮೀಯತೆಯಿಂದ ಆಕೆಯ ಸಂಶಯ ನಿವಾರಿಸಿದ. ನನ್ನ ತನು–ಮನ ವಚನಗಳು ಆರಾರ ಭಾವದ ಭಂಗಿಯಂತಿಹುದೊ ಅಂತೆ ಆ ಥರ ನೀಡುತ್ತವೆ. ತನು ಮನ ಚಾಯೆಗಳು ತೋರಿದರೂ ನಾನು ಅಂಗವಿದನೆಂದು ನೀನು ಮನಸ್ಸಿಗೆ ತಾರದಿರಿ. ಮುಕ್ತಾಯಕ್ಕ ಎಲ್ಲವೂ ಸರಿ, ನಿಜ ವಿಚಾರಿಸಿದರೆ, ಆ ಪಿಂಡಮಯ ದೇಹವಿಲ್ಲದಿದ್ದರೆ, ತಾಳೋಕ್ಷ ಸಂಪುಟ ಸಂಗ ಶಬ್ಧಗಳು ನಿಮ್ಮ ಒಡಲಲ್ಲಿ ಎಲ್ಲಿ ಜನಿಸಿದವು? ರೇಶಿಮೆಯ ಹುರಿಯಂತೆ ತೊಡಕಾಗಿರುವ ನಿನ್ನ ಮಾತಿನ ರೀತಿಯನ್ನು ವಿವರಿಸಿ ಹೇಳು ಎಂದು ಪ್ರಾರ್ಥಿಸಿದಳು. ಆಗ ಅಲ್ಲಮ ಪ್ರಭು ವಿವರಿಸುತ್ತಾನೆ.

ಮಗಳೆ ಕೇಳೌ ಪೃಥ್ವಿಮಯತನು
ಮುಗಿಲಿಗಿಲ್ಲದೊಡೇನು ಗರ್ಜನೆ
ನೆಗಳುತಿರುವೇ ಲೋಕವರಿಯಲದೇನು ಸೋಜಿಗವೆ
ಬಗೆಯ ಸಾಕ್ಷಾದಪ್ರಮೇಯದ
ಸಗುಣ ನಿರ್ಗುಣವೆನಿಸುವೆನ್ನಯ
ವಿಗಡತನಕೇನರಿದು ನುಡಿ ಮುಕ್ತಾಯಿ ಕೇಳೆಂದ ೨೯

ಉಪಮಾನ–ಉಪಮೇಯಗಳ ಮೂಲಕ ಎಳೆ ಎಳೆಯಾಗಿ ಬಿಡಿಸಿ ಅರ್ಥವಾಗುವಂತೆ ನಿರೂಪಿಸಿದ ಅಲ್ಲಮನ ಉತ್ತರದಿಂದ ಮುಕ್ತಾಯಿಯ ಮನ ಸಂಶಯ ಮುಕ್ತಾಯವಾಯಿತು.

---

ಆಕೆಯ ಅರಿವಿನ ಕಣ್ದೆರೆಯಿತು. ವಿನೀತಭಾವದಿಂದ ಆಕೆ ಹೀಗೆ ಭಿನ್ನವಿಸಿದಳು. ನಿಮ್ಮಯ ಮಹಿಮೆಯನು ನಾವೆತ್ತ ಬಲ್ಲೆವು? ಸಹಜವಾದೊಡೆ ವೇದಶಾಸ್ತ್ರಗಮುಗಳುಪವಿಸದ ನೀನೆ ಶರಣೆಂದಿಹೆವು ನಾವು, ನಮಗೇಕೆ ತರ್ಕಸ್ಪೃಹಗಳು?. ಆಗ ಮುಕ್ತಾಯಕ್ಕನಲ್ಲಿ ಮನದಮತ್ಸರವಳಿದು ಸಮತೆಯು ನೆನಹು ನೆಲಸಿ, ನಿರ್ಗರ್ವತನ ದೊಂದನುಭವ ಣೆಯಳವಟ್ಟುದು . ಬಳಿಕ ಗುರು ಗುಹೇಶ್ವರನು ಆಕೆಗೆ ವಿನುತ ನಿತ್ಯಾನಂದ ನಿರ್ಮಳ ತನುವೆ ತಾನಿಹ ಸೌಖ್ಯತೆಯ ಸೂಚನೆಯನು ಉಪದೇಶಿಸಿದ. ಮುಕ್ತಾಯಕ್ಕನ ಮನದ ಮುಂದಕ್ಕೆ ಅಜ್ಞಾನದ ಮಾಯೆಯ ಕರಿಯ ತೆರೆ ಸರಿಯಿತು; ಅನುಭಾವ ರವಿಯ ಉದಯವಾಯಿತು. ಅಲ್ಲಮ ಆಕೆಗೆ ಅವಿರಳ ಸಾಧನಾ-ವಿಧಾನವನ್ನು ತನ್ನ ಸಹಜ ರೀತಿಯಲ್ಲಿ ಉಪದೇಶಿಸಿದಾಗ

> ನೂಲು ಹಿಡಿದೋಜೆಯಲಿ ಬೆಟ್ಟದ
> ಮೇಲನಡರುವರಂತೆ ಭಕ್ತಿಯ
> ಕೀಲನುಪದೇಶಿಸಿದ ಗುರುವಚನಾಜ್ಞೆಯನು ಹಿಡಿದು
> ಲೀಲೆಯಿಂದಾ ಬ್ರಹ್ಮರಂಧ್ರವ
> ನಾಲಿಸುತಲೊಡಹಾಯ್ದು ನಿಜದನಿ
> ರಾಳದಲಿ ನಿಂದಿರ್ದಳಾ ಮುಕ್ತಾಯಿ ಭಕ್ತಿಯಲಿ [೩೦]

ಗುರುವಾಜ್ಞೆಯನ್ನು ಹಿಡಿದು, ಶಿವಯೋಗಸಾಧನೆ ಕೈಕೊಂಡು, ನಿಜದ ನಿರಾಳವನ್ನೂ ಸಾಧಿಸಿ ಮುಕ್ತಾಯಕ್ಕೆ ಸದ್ಯೋನ್ಮುಕ್ತೆ ಆದಳು.

ಸಾಧಕನು ಬಾಹ್ಯದೊಂದಿಗೆ ಅಂತರಂಗವನ್ನೂ ಸಂಸ್ಕರಿಸಿಕೊಳ್ಳುವುದು ಅನಿವಾರ್ಯ; ಹೊರಗಿನ ಮಾಟದೊಂದಿಗೆ ಒಳಗಿನ ಕೂಟವನ್ನು ಆತ ಸಾಧಿಸಿಕೊಳ್ಳಬೇಕು. ಇದೇ ಅಲ್ಲಮ ಪ್ರಭುವಿನ ಬೋಧೆಯ ಹುರುಳು-ತಿರುಳು. ಮುಕ್ತಾಯಕ್ಕನ ಪ್ರಸಂಗದಲ್ಲಿ ಅರಿವೆ ಗುರು ಎಂಬ ಗುರುತತ್ವವನ್ನೂ ಕವಿ ಪ್ರಕಟಪಡಿಸಿರುವುದನ್ನು ಕಾಣುತ್ತೇವೆ.

### ೬. ಗೊಗ್ಗಯ್ಯನ ಪ್ರಸಂಗ :

ಭಕ್ತಿಯ ಕಾಲು ಕೀಲನನುದಿದು ತೋರಿಸಿ ಪಾಲಿಸುತ್ತ ಸುಳಿಯುತ್ತಿದ್ದ ಪರಬೊಮ್ಮ ನಲ್ಲಮನಿಗೆ ಮಣ್ಣು ಮಾಯೆಯಾಗಿ ಕವಿದು, ಕೃಷಿ ಕಾಯಕವೆ ಭಕ್ತಿ ಎಂದು ನೆರೆ ನಂಬಿದ್ದ ಗೊಗ್ಗಯ್ಯನೆಂದ ತೋಟಿಗನ ಬೇಸಾಯದ ಹೋರಟೆ ಕಾಣಿಸಿತು. ಈ ಅರಿವನ್ನು ಲೆಕ್ಕಿಸದೆ ಬಡದಾಸೆಗೆ ಈ ರೀತಿ ಮೋಹಕ್ಕೆ ಒಳಗಾಗಿದೆಯಲ್ಲ ಎಂದ ಅಲ್ಲಮ. ಪಾವನೀಕೃತ ಚಿತ್ತನಾದ ಗೊಗ್ಗಯ್ಯನಿಗೆ ಕರುಣೆ ತೋರಲು ಬಯಸಿ ಅವನ ತೋಟದಲ್ಲಿ ಮೈದೋರಿದೆ. ಗೊಗ್ಗಯ್ಯನಿಗೆ ಅಲ್ಲಮ ಪ್ರಭು ಬೋಧಿಸಿದ್ದು ಹೀಗೆ : ಮನುಷ್ಯ ಕೇವಲ ಬಹಿರ್ವ್ಯವಸಾಯದಲ್ಲಿ ಮಗ್ನನಾಗಿ ತನ್ನ ಅಂತರಂಗದ ಮನೆಯನ್ನು ಹಾಳು ಗೆಡವಬಾರದು ಬಹಿರಂಗದ ಕ್ರಿಯೆಗಳೊಡನೆ ಅಂತರಂಗದ ಸಾಧನೆ ಸಹ ನಿರಂತರವಾಗಿ ನಡೆಯಬೇಕು ಎಂದು ಗೊಗ್ಗಯ್ಯನಿಗೆ ಅಲ್ಲಮ ಉಪದೇಶಿಸಿದ.

ತನಗೆ ಪರಿಚಯ ವಿರುವ ಭಾಷೆಯಲ್ಲಿ ತನಗೆ ಕರಗತವಾದ ಕಾಯಕದ ಕ್ರಮದಲ್ಲಿ, ತನ್ನ ಅಂತರಂಗದ ತೋಟಗಾರಿಕೆಯ ರಹಸ್ಯವನ್ನು ಕರುಣಿಸಿದ ಅಲ್ಲಮನನ್ನು ಗೊಗ್ಗಯ್ಯ ಹೀಗೆ

---

ಪ್ರಾರ್ಥಿಸುತ್ತಾನೆ.

ದೀನಮನದವನಂತೆ ಕಂಡ ನಿ
ಧಾನವನು ತಾನೊಬ್ಬನುಂಬನೆ
ದಾನಿ ಲೇಸೈ ನಿನ್ನ ಪರಿ ನೀ ಕಂಡ ಶಿವಪಥವ
ಮಾನವರಿಗಱುಹೆಂಬ ಮಹದಭಿ
ಮಾನಿ ನೀನೇ ಜಗದ ಗುರು ............. [೩೧]

ಗೊಗ್ಗಯ್ಯನ ಭಕ್ತಿ ಭಾವದಿಂದ ತೃಪ್ತನಾದ ಅಲ್ಲಮ, ಇಳೆಯ ಭಕ್ತರ ಪಾವನವ ಮಾಡಲಿಕ್ಕೆ ತಾನು ಕುರುಹು ವಿಡಿದ ಅಗ್ಗಳಿಯತನದಲಿ ನಡೆದನು.

ತಾನೊಬ್ಬನೆ ಮಾಯಾ ಕೋಳಾ ಹಳನಾಗಿ, ಅಂದರೆ ನಿರ್ಮಾಯನಾಗಿ ಇರುವುದು ಅಲ್ಲಮನಿಗೆ ಸಮಾಧಾನ ತರಲಿಲ್ಲ. ಪರಮಾತ್ಮನ ನಿಜಸ್ವರೂಪವನ್ನು ತಿಳಿಯ ಬಯಸಿ ಭಕ್ತ ಜನರು ಇರುವುದನ್ನರಿತ ಅಲ್ಲಮ ಪ್ರಭು, ತನ್ನ ಕಟಾಕ್ಷ ಕಾಂತಿಯಲ್ಲಿ ಹಿಂಗಿಸುವೆನೆಲ್ಲರ ಮನೋಮಯದಂಗದೊಳ ಹೊರಗಿಡಿದ ತಮದ ತರಂಗಗಳನು ಎಂದು ಕಾರಣ ಕಾರ್ಯದಲಿ ಸುಳಿದ. ಅವನು ಸಂಧಿಸಿದ ಮೊದಲ ಭಕ್ತ ಗೊಗ್ಗಯ್ಯನೆಂಬ ತೋಟಿಗ. ಗೊಗ್ಗಯ್ಯನಿಗೆ ತಿಳಿದಿರುವ ಬಹಿರಂಗ ಬೇಸಾಯದ ಜೊತೆಗೆ ಅವನ ಅಂತರಂಗ ಕೃಷಿಯೂ ಮುಖ್ಯ. ಅದಕ್ಕಾಗಿ ಅವನು ಗೊಗ್ಗಯ್ಯನಿಗೆ ತಿಳಿಸಿ ಹೇಳಿದ. ಯಾವ ವ್ಯವಸಾಯವನ್ನೂ ಮಾದಿದ್ದರೂ ಸಹ ವ್ಯಥೆಗಳು ತಪ್ಪವು. ಅದರಲ್ಲಿ ದೇವ ಒಲಿವನೆ? ನೋವು ನಿಲ್ಲುವುದೇ? ಸಾವು ಹಿಂಗುವುದೆ? ಅದು ಭವಿಗಳ ಉದ್ಯಮ. ಇದಾವುದೂ ಅಲ್ಲದೆ ವಿಚಾರವನ್ನೂ, ಗೊಗ್ಗಯ್ಯ ಕೇಳು: ಇಲ್ಲಿ ಭಕ್ತಿ ಮಾಡುತಲಿ ಕಡೆಯಲ್ಲಿ ಕೈಲಾಸವನು ಹೊಕ್ಕೊಡೆಲ್ಲಿಯವು ಬಿಡು, ನೋವು ಸಾವುಗಳೆಂಬ ಸಂಕಟವು! ನಿನಗೆ ನಂಬುಗೆ ಇಲ್ಲವೆ? ಹಾಗಿದ್ದರೆ ತಿಳಿದವರನ್ನೂ ಕೇಳು ಎಂದು ವಿಶ್ವಾಸ ತುಂಬುತ್ತ ಅಲ್ಲಮನ ಮಾತು ಮುಂದುವರಿಸಿದ! ಗೊಗ್ಗಯ್ಯ, ಮನಸ್ಸುಗೊಟ್ಟು ಕೇಳು. ಜೀವಲವ ಮಾತ್ರವನು ನೋಯಿಸಿ ಭಕ್ತಿಯಲಿ ಕೈಲಾಸ ಪುರದೊಳಗೆ ಭವನ ಬಸಿರೊಳಗಿರ್ದೆಡೆಯೂ ಸಂಭವಿಸುವುವು ಕಡುನೋವು ಸಾವುಗಳು. ಅವುಗಳನ್ನೂ ಕಳೆಯುವವರನ್ನೂ ನಾನು ಕಾಣೆ. ಯಾರು ಏನೇ ಹೇಳಲಿ ಕೊಂದವಗೆ ಕೊಲೆ ತಪ್ಪದು! ಬಂಧನಪ್ರದ ಬಾಹ್ಯ ಕರ್ಮಗಳು ಒಂದುಗೂಡಿದೊಡೆ ಅವರಿಗೆ ಸಂದ ನಿಜ ಸುಖವಿಲ್ಲ.

ಅಲ್ಲಮ ಪ್ರಭುವಿನ ಈ ಉಪದೇಶ ಗೊಗ್ಗಯ್ಯನಿಗೆ ಎಳ್ಳಷ್ಟು ತಿಳಿಯಲಿಲ್ಲ. ಆಗ ಅವನು ತನ್ನ ಅಸಹಾಯಕತೆಯನ್ನು ಹೇಳಿದ "ಪ್ರಭುವೇ! ನಾನರಿಯನೈ ನೀ ಬಲ್ಲೆ ನಿನ್ನ ಮನದ ದೃಷ್ಯಾಂತವನ್ನು ತೋರಿಸಿ ಹತ್ತಿಸುವೆ ನೀತಂಗೆ ಹಾದಿಯನು" ಎನುತ ಅತಿ ಕೃತಿಯ ಚಿತ್ತದಲಿ ಎಂದು ಅಲ್ಲಮ ಗೊಗ್ಗಯ್ಯ ಅಗುಳಿ ಕಿತ್ತ ಹೆಂಟೆಯ ಕೆಳಗೆ ಬಂದು ಹೊಳೆಯುವ ಹೊಂಗಳಸವನ್ನು ನಿಮಿಷ ಮಾತ್ರದಲಿ ಅವನಿಗೆ ತೋರಿಸಿದನು. ಗೊಗ್ಗಯ್ಯ ಆಶ್ಚರ್ಯಚಕಿತನಾದ. ಇಬ್ಬರೂ ಅಗೆಯುತ್ತ ಹೋಗಲು ಒಳಗೆ ಬಂದು ದೇಗುಲವಿದ್ದುದು ಕಂಡುಬರುತ್ತದೆ. ಅಲ್ಲೊಬ್ಬ ಶಿವಯೋಗಿ ತನ್ನ ಇಷ್ಟಲಿಂಗದಲ್ಲಿ ಅನಿಮಿಷ ದೃಷ್ಟಿ ನೆಟ್ಟು ಕುಳಿತಿದ್ದ. ಪ್ರಭು ಅದನ್ನು ಗೊಗ್ಗಯ್ಯನಿಗೆ ತೋರಿಸಿ ಇದೆ ಕಣಾ ಶಿವಲಿಂಗ ಭಕ್ತಿಯ ಹೃದಯವನು ಸಾಧಿಸುವ ಪರಿ ಎಂದು ವಿವರಿಸುತ್ತಾನೆ.

---

ಬಡವನು ಅಕ್ಷಯ ನಿಧಿ–ನಿಧಾನವನು ಎಡವಿ ಕಂಡಂತೆ ಕೈಕಾಲುಗಳು ಹೆಳವನಿಗೆ ಹೊಂದಿದಂತೆ, ಕುರುಡನಿಗೆ ಕಣ್ಣು ಬಂದಂತೆ, ಬಿಡದೆ ಹುಡುಕುವಬಳ್ಳಿ ಕಾಲಿಗೆ ತೊಡರಿತು ಎಂಬಂತೆ ತನ್ನ ಬಯಕೆಯ ಕೊನೆಯನ್ನು ಕಂಡೆನೆನ್ನುತ್ತ ಅಲ್ಲಮ ಉಚಿತ ರೀತಿಯಲ್ಲಿ ನುಡಿದ ಬಳಿಕ ಗುರುವೆ ಕರುಣಿಸು , ಭಕ್ತಿ ಭಾವದ ಪುತ್ಥಳಿಯೆ ಕರುಣಿಸು, ಲಿಂಗ ನಿಷ್ಠೆಯ ಶ್ರೇಷ್ಠನೇ ಕರುಣಿಸು, ಎಂದು ಅನಿಮಿಷನನ್ನು ಕೊಂಡಾಡಿದ. ಇತರರಿಗೆ ತಾನು ನಿಜವಾಗಿ ಮನುಷ್ಯನು ಎಂಬ ಬಳಕೆಯ ರೀತಿಯನ್ನೂ ಅಂಗೀಕರಿಸಿ ಅಲ್ಲಮನು ತನ್ನ ಲೀಲೆಯಿಂದ ನಟಿಸುತ್ತಿದ್ದನು.

೭. ಸಿದ್ಧರಾಮನ ಪ್ರಸಂಗ :

ಬಳಿಕ ಅಲ್ಲಮ ಪ್ರಭು ಸಾಧಿಸಿದ ವ್ಯಕ್ತಿ ಸೊನ್ನಲಿಗೆಯ ಸಿದ್ಧರಾಮ. ಪಿಂಡದೊಳು ಪಿರಿದೆನಿಪ ನಾಡಿಮಂಡಳಂಗಳ ಯೋಗಸಾಧನೆಗೈದು ಅಖಂಡ ಜ್ಞಾನವನ್ನು ಪಡೆದ ಆತ ಮಹಾಯೋಗಿ ಸಾಕಾರದೊಳು ನಿಷ್ಠೆ, ಭೂತಂಗಳೊಳು ಅನುಕಂಪ ಇದು ಆತನ ಜೀವನ – ಸೂತ್ರವಾಗಿದ್ದಿತು. ಅದರ ಪ್ರಕಾರ ಕೆರೆ ದೇಗುಲಗಳನ್ನು ಕಟ್ಟಿಸುತ್ತ, ದು:ಖಿತರ ಅಳಲನ್ನು ನಿವಾರಿಸುತ್ತ, ಸಾರ್ಥಕ ಜೀವನ ನಡೆಸಿದಾತ. ಆತನಲ್ಲಿಗೆ ಪ್ರಭು ಬಂದಾಗ ಸಿದ್ಧರಾಮನ ಸ್ಥಿತಿಗೆ

ನೂಲ ಸಂಕಲೆಗಡಿದು ಕನಕದ
ಕೋಳವನು ಕಾಲಿಂಗೆ ಕೀಲಿಪ
ಕಾಳುಮತಿಯನವನಂತೆ ಸತಿಸುತಕೂಟ ಭಯವೆಂದು
ಬಾಳಿಕೆಯನತಿಗಳೆದು ಮರಳಿಯು
ಬೋಳುಮಂಡೆಯ ಕೀರ್ತಿಗೋಸುಗ
ಕೋಳು ಹೋದನೆ ರಾಮನೆನುತಲ್ಲಮನು ಬೆಱಗಾದ [೩೨]

ಈ ರೀತಿ ಬೆರಗಾದ ಅಲ್ಲಮನಿಗೆ,

ಬೆಕ್ಕು ಸಂಸಾರವನು ಸಡಲಿಸಿ
ಹೊಕ್ಕನಲ್ಲಾ ಹಿರಿಯ ಸಂಸಾ
ರಕ್ಕಕಟ ವಿಖ್ಯಾತಿಪೂಜಾಲಾಭದಿಚ್ಛೆಯಲಿ
ಸಿಕ್ಕಿ ಬಿದ್ದನು ಸಿದ್ಧರಾಮನು.............................. [೩೩]

ಎಂಬುದಾಗಿ ಮರುಕಗೊಂಡು

ಒಡ್ಡರಾಮನಿದೇನು ಗೊಡವೆಯ
ನೊಡ್ಡಿಕೊಂಡು ವೃಥಾ ಮನಸ್ಸನು
ಗೊಡ್ಡುಮಾಡಿಯೆ ಕೆಟ್ಟನು [೩೪]

ಎಂಬುದಾಗಿ ಅಂತ:ಕರಣದಿಂದ ಅವನನ್ನೂ ಉದ್ಧರಿಸುವ ಹಂಚಿಕೆ ಹೂಡಿದ:

ಸೊನ್ನಲಿಗೆಯ ಕೆರೆಯ ಕೆಲಸ ಭರದಿಂದ ಸಾಗುತ್ತಿತ್ತು. ಕೆರೆಯ ಕೆಲಸದಲ್ಲಿ ನಿರತನಾಗಿದ್ದ ಒಡ್ಡರನ್ನು ಅಲ್ಲಮ, ಎಲ್ಲಿಹನು ನಿಮ್ಮ ಒಡ್ಡರಾಮಯ್ಯ? ಎಂದು ವ್ಯಂಗಸ್ವರದಲ್ಲಿ ಕೇಳಿದನು.

ಸಿದ್ಧರಾಮನನ್ನು ಶಿವನೆಂದು ನಂಬಿದ್ದ ಒಡ್ಡರು ತಮ್ಮ ಗುರುವಿನ ನಿಂದೆ ಸಹಿಸದೆ ಕೆರಳಿದ ಸಿದ್ಧರಾಮನನ್ನು ಕರೆತಂದರು. ಸಿದ್ಧರಾಮ ತನ್ನ ಹಣೆಯನ್ನು ತೆರೆದು ಜ್ವಾಲೆ ಕಾರಿದ. ಆಗ ಅಲ್ಲಮ, ನೀನು ಯೋಗಿ, "ಹಿಂಸಾಧರ್ಮಕರ್ಮದಲಿ................ಮುನ್ನೆನಿತ ಕೊಂದೆಯೋ? .................ನಿನ್ನೊಳು ಮಾತನಾಡಲಿಕಾಗದೇತು" ಎಂದು ಜಡಿದು ನುಡಿದ. ಸಿದ್ಧರಾಮನ ಯೋಗಸಿದ್ಧಗೂ ಕಿಡಿ ಬಿದ್ದಂತೆ, ಆತನ ಸಿದ್ಧಿಯ ಸೃಷ್ಟಿಯಾದ ಸೊನ್ನಲಾಪುರಕ್ಕೆ ಬೆಂಕಿ ಹತ್ತಿತು. ಅವನ ಗುಡ್ಡರೂ ದಗ್ಧರಾದರು. ಎಲ್ಲ ಜನರು ಬೊಬ್ಬೆಯಿಟ್ಟರು.

ಕಡಲನತಿಮಥನ ಮಾಡಲು ಸುಡುತ್ತ ಬಂದ ಹಾಲಾಹಲಾಗ್ನಿ ಕುಡಿದು ಲೋಕವನ್ನೂ ರಕ್ಷಿಸಿದ ಶಿವನಂತೆ, ಅಲ್ಲಮ ಪ್ರಭು ಆ ಬೇಗೆಯನ್ನೆಲ್ಲ ನಿಮಿಷದಲ್ಲಿ ತನ್ನಡಿಯ ಕೃತಿಯಲಿ ತೊಡೆದು ಹಾಕಿದ. ಆಗ ಸಿದ್ಧರಾಮನ ಶಿಷ್ಯರೆಲ್ಲರೂ ಕಲ್ಲು ಗುಂಡುಗಳಿಂದ ಅಲ್ಲಮನನ್ನೂ ಹೊಡೆಯಲು ಯತ್ನಿಸಿ ಕೃತಾರ್ಥರಾಗದೆ ಸಿದ್ಧರಾಮನ ಬಳಿಗೆ ಬಂದು ದೂರು ಹೇಳಿದರು. ತನ್ನನ್ನೂ ನಿಂದಿಸಿದ ದುರಾತ್ಮನನ್ನೂ ಭಸ್ಮ ಮಾಡುವುದಾಗಿ ಸಿದ್ಧರಾಮನು ಕೋಪೋದ್ರೇಕದಿಂದ ಎದ್ದು ಬರಲು ಅಲ್ಲಮ ನಗುನಗುತ್ತ "ಲೇಸು ಲೇಸೈ! ಸಿದ್ಧರಾಮನ ವಾಸಿ ಸಂಸಾರಿಗಳಿಗಿಂದಲಿ ಸಾಸಿರಕೆ ವೆಗ್ಗಳಿಸಿತಲಾ! ಸುಡುಸುಡುಯತಿತ್ವವನು ಈಸು ಕೋಪಾಟೋಪ ರೋಷವೇಶ ವೇತಕೆ ಯೋಗಿಯಾದ ನಿರಾಸೆವಂತಂಗೆ?"ಎಂದನು. ಸಾಕು ಸಾಕು, ಮಹೇಂದ್ರಜಾಲವನೀಕಲಿತು ಬಂದೆಮ್ಮ ಮಂದಿಯ ಕಾಕು ತನದಲಿ ಕಡಿದು ವೊಗ್ಗಿನ್ನೂ ನಮ್ಮೊಡನೆ ನೂಕಲಱಿಯದು ನಿನಗೆ ಎಂದು ಸಿದ್ಧರಾಮನು ಉದ್ರೇಕದಿಂದ ಹೇಳಿದನು.

ಅಲ್ಲಮ ಭಾಪುರೆ! ಮಝು! ಪೂತು! ನೀನಹುದು! ಈ ಪರಿಯಲಿರಬೇಕು ಮನದಾಳಾ ಪದಾಂಗವಣೆಗಳು ಮಿಗೆ ಮಾಯಾ ಪ್ರಪಂಚಿನಲಿ. "ಕೋಪ ನಿಮ್ಮಯ ಸಂಪ್ರಾದಾಯ ಕಳಾಪದಲಿ ಶಾಶ್ವತ ವಲಾ! ನಿರ್ಲೇಪಗ್ನಿ ಪರಿಯುಚಿತವೇ ರಾಮಯ್ಯ?" ಎನ್ನುತ್ತಾನೆ. ಅಲ್ಲಮ ಮತ್ತು ಸಿದ್ಧರಾಮನ ನಡುವೆ ಸಾಗುವ ಸಂವಾದ ಅನನ್ಯವಾಗಿದೆ.

ಸಿದ್ಧರಾಮ "ಕೆಣಕದಿರು ನೀ ಸಂಪ್ರದಾಯಗಳೆಣಿಕೆ ನಿನಗೇಕೆ................ಎನ್ನ ಜರಿದರೆ ಹಣೆಯ ಕಣ್ಣಿನ ಕಿಡಿಯ ಕೆದರುವೆನು". ಅದಕ್ಕೆ ಪ್ರತಿಯಾಗಿ ಅಲ್ಲಮ–ಚಾಗು ಚಾಗುರೆ! ನೊಸಲ ಕಣ್ಣಿನ ಬೇನೆಯಲಿ ಮುನ್ನೆನಿತ ಕೊಂದೆಯೊ! ಯೋಗಿಯಹುದ್ಯೆ ನೀನು ಹಿಂಸಾಧರ್ಮಕರ್ಮದಲಿ! ರಾಗದಿಂದುರಿದೇಳುತಿಹ ಭವತೋಗಿ ನಿನ್ನೊಳು ಮಾತನಾಡಲಿ ಕಾಗದೇಮಗೆ ಎಂದು ಕೋಪದಲ್ಲಿ ಸಿದ್ಧರಾಮ ಹಣೆಗಣ್ಣು ತೆರೆಯುತ್ತಾನೆ. ಊರೆಲ್ಲ ಸುಟ್ಟು ಹೋಗುತ್ತಿರುವುದಲ್ಲದೆ ಅಲ್ಲಮನಿಗೆ ಯಾವುದೇ ಬಾಧೆಯಾಗುವುದಿಲ್ಲ. ಸಿದ್ಧರಾಮ ಬಿಟ್ಟ ಉರಿಯನ್ನು ಅಲ್ಲಮ ತನ್ನ ಅಂಗಾಲಲ್ಲಿ ಅಡಗಿಸಿಕೊಂಡನು. ಇವುಗಳನ್ನೆಲ್ಲ ನೋಡಿದ ತರುವಾಯ ಸಿದ್ಧರಾಮನಿಗೆ ಜ್ಞಾನೋದಯವಾಯಿತು ಬಂದಿರುವವನು ತನ್ನ ಆರಾಧ್ಯದೇವನೇ ಇರಬೇಕೆಂದು ತಿಳಿದು ಪಶ್ಚಾತ್ತಾಪ ಪಟ್ಟು ಅಲ್ಲಮನ ಚರಣಗಳ ಮೇಲೆ ಬಿದ್ದು ಮಾಡಿದ ಅಪರಾಧಕ್ಕೆ ಕ್ಷಮಾಪಣೆಯನ್ನು ಬೇಡುತ್ತಾನೆ.

ಸಿದ್ಧರಾಮನ ಅಹಂಕಾರ ಕರಗಿ ವಿನಯವಾಯಿತು. ಕೋಪವಡಗಿ ಭಕ್ತಿಭಾವ ಉದಯಿಸಿತು. ಅಲ್ಲಮನ ಪಾದಗಳಿಗೆ ಎರಗಿ, ಕರುಣಾಕರನೆ ರಕ್ಷಿಸು ಎಂದು ಅವನು

ಬೇಡಿಕೊಂಡ.

ಮನದೊಳಗೆ ನಸುನಗುತ್ತ ಈ ಮೂರ್ಖತನ ಗುಣಂಗಳನೇನೆ ನೋಡುವೆನೆಂದು ಸರ್ವಜೀವದ ಯಾಪ್ರದಯಕ ಅಲ್ಲಮನು ಮುಂದುವರಿದು

ತನುಜ, ಸಾಕೇಳೇಳು ಖಾತಿಯ
ನೆನಹು ನಮ್ಮೊಳಗಿಲ್ಲವೆನುತಲಿ
ವಿನಯದಿಂದೆತ್ತಿದನು ರಾಮನ ವಿಮಲ ಮಸ್ತಕವ [೩೫]

ದಾರಿತಪ್ಪಿದ ಸಿದ್ಧರಾಮನನ್ನೂ ಸರಿಯಾದ ಮಾರ್ಗಕ್ಕೆ ತರುವ ಪೀಠಿಕೆಯಂತೆ ಅಲ್ಲಮ ನಸುನಗುತ್ತಲೆ ನುಡಿದ. ಸಿದ್ಧರಾಮನಿಗೆ ಆಶ್ಚರ್ಯವಾಯಿತು; ಅವನ ನಿಷ್ಠೆಯೇ ಅಲುಗಾಡಿದಂತಾಯಿತು.

ತೊಱೆದು ಸತಿ ಸುತ ಮಾತೆ ಪಿತರುಗ
ಳೆಱಕವನು ಯತಿಯಾಗಿ ಸುಖದಲಿ
ಕೆಱೆಗಳಾರವೆ ಬಾವಿ ದೇಗುಲಗಳನು ರಚಿಸಿದರೆ
ಅಱಿಯವಾರದು ಕಂಡ ಬಳಿಕಿ
ನ್ನಱಿವ ಪರಿಯೆಂತಯ್ಯ ನಿಜವನು
ಬಱಿದೆ ಬಣ್ಣಿಸಬೇಡವೈ ಗುರುರಾಯ [೩೬]

ಎಂದು ಸಿದ್ಧರಾಮ ಪ್ರಾರ್ಥಿಸಿದ.

ಲೋಕಹಿತಕಾರ್ಯಗಳು ಅನಿಷ್ಟವೇನಲ್ಲ. ಆದರೆ ಅವುಗಳಲ್ಲಿಯೇ ಆಸಕ್ತನಾಗಿ ಅವುಗಳಿಗಿಂತಲೂ ಮಿಗಿಲಾದ ಅಂತರಂಗದ ವಿಕಾಸವನ್ನೂ ಉಪೇಕ್ಷಿಸುವುದು ಅನಿಷ್ಟ. ಹೊರಗೆ ಕೆರೆಕಟ್ಟುವ ಅಗತ್ಯದಷ್ಟೇ ಅದೇಕೋ ಅದಕ್ಕೂ ಹೊತ್ತಿಗೆ ಅಗತ್ಯವಾದದ್ದು ಒಳಗಿನ ಕೆರೆ. ಆ ಕೆರೆ ಎಂಥದೆಂಬುದನ್ನೂ ಅಲ್ಲಮನೇ ಅನನ್ಯವಾಗಿ ಬಣ್ಣಿಸಿದ್ದಾನೆ.

## ಇ) ಪಾತ್ರ ಚಿತ್ರಣ :

### ೧. ಅಲ್ಲಮ :

ಅಲ್ಲಮನ ಬಗ್ಗೆ ಅವರ ಸಮಕಾಲೀನರು ದಾಖಲಿಸಿರುವ ಅಭಿಪ್ರಾಯಗಳಲ್ಲದೆ, ಅವರ ನಿಕಟ ತರುವಾಯದ ಹರಿಹರ ರಚಿಸಿದ ರಗಳೆಯಿದೆ. ಅನಂತರದ ಪ್ರಭುಲಿಂಗ ಲೀಲೆಯಿದೆ. ಶೂನ್ಯ ಸಂಪಾದನೆಗಳಿವೆ. ಇತರ ಪ್ರಮಥರನ್ನೂ ಕುರಿತ ಕಾವ್ಯಗಳ ನಡುವೆ ಬರುವ ಉಲ್ಲೇಖಗಳಿವೆ ಇವೆಲ್ಲಕ್ಕಿಂತ ಮಿಗಿಲಾಗಿ ತಾವೇ ರಚಿಸಿದ ವಚನರಾಶಿಯಿದೆ.

ಎಲ್ಲಿರ್ದನಲ್ಲಿಯೆ ವಸಂತಮಾಸಂ ನೋಡ
ಎಲ್ಲಿರ್ದನಲ್ಲಿ ದಿವ್ಯ ಕ್ಷೇತ್ರಮುಂ ನೋಡ [೩೭]

ಲೇಸುಮಾಡುವತಾವುಗಳಲಭಿ
ಲಾಷೆಯಿಲ್ಲದೆ ಹೊಯ್ದುವೆವು ಸುಖ
ವಾಸಿಗಳು ನಾವೆಂದಲ್ಲಮನೊಲಿದು ಸತಿಯರಿಗೆ [೩೮]

ಅಲ್ಲಮ ಪ್ರಭು ಆಗ ತಾನೇ ಹುಡುಕಿಕೊಂಡು ಹೋದನೇನೋ ಎನ್ನುವಂತೆ, ತಾವು ಹಮ್ಮಿಕೊಂಡಿದ್ದ ಸಾಧನೆಗಳಲ್ಲಿ ದಿಕ್ಕುತಪ್ಪಿದ ಅನೇಕರನ್ನು ಕಂಡು, ಅವರವರ ಸಂದೇಹ ನಿವಾರಿಸಿ, ಸೂಕ್ತ ಮಾರ್ಗ ತೋರಿಸಿದ ಸಂಗತಿ ಅನನ್ಯವಾಗಿದೆ.

ಲಿಂಗನಿಜವನು ಬಯಸಿ ಭಕ್ತಜ
ನಂಗಳಿರುತಿರಲಲ್ಲಮಪ್ರಭು
ಲಿಂಗನಂತದನ ದು ತನ್ನ ಕಟಾಕ್ಷಕಾಂತಿಯಲಿ
ಹಿಂಗಿಸುವೆನೆಲ್ಲರ ಮನೋಮಯ
ದಂಗದೊಳಹೊಱಗಿಡಿದ ತಮದ ತ
ರಂಗಳನೆಂದೆನುತೆ ಕಾರಣಕಾಯದಲ್ಲಿ ಸುಳಿದ [೩೯]

ನಿಜವನ್ನರಿಯಲು ಬಯಸುವ ಭಕ್ತ ಜನರ ಮನೋಮಯದಂಗದ ಒಳಹೊರಗೆ ಕವಿದ ತಮದ ತರಂಗಗಳನ್ನು ತನ್ನ ಕಟಾಕ್ಷ ಕಾಂತಿಯಲಿಹಿಂಗಿಸುವೆನು ಎಂದು ಅಲ್ಲಮ ಪ್ರಭು ಕಾರಣ ಕಾಯದಲಿ ಸುಳಿದ. ಅತನ ಕಾರಣ ಕಾಯದ ಸುಳುಹಿನ ವೈಶಿಷ್ಟ್ಯವು ಹೀಗಿತ್ತು.

ತಂಗಿ ಕೇಳಾರಾರ ಭಾವದ
ಭಂಗಿಯಂತಿಹುದಂತೆ ಮದ್ವಚ
ನಂಗಳೆಮ್ಮಯ ತನುಮನೋವಚನಗಳು ತೋಱಿದೊಡೆ
ಅಂಗವಿದರಾವೆಂದು ನೀ ಮನ
ಸಿಂಗೆ ತಾರದಿಹೆನುತ ಲಲ್ಲಮ
ಲಿಂಗನಾಕೆಗಿದೊಂದು ರೀತಿಯ ನುಡಿದು ತೋಱಿಸಿದ [೪೦]

ಅಱಿಯಬೇಕಾರಾವ ವೇಷದ
ಮಱೆಯಲಿಹರೋ ಮೇಣು ಲಿಂಗದ
ಬೆಱಗಿನಲಿ ಕಂಡವರ ಕಣ್ಣಿಗೆ ಮರುಳರಾಗಿಹರೊ
ಮೆಱೆವ ಭಕ್ತರ ಮನವ ನೋಡಲು
ಮಱೆಸಿಹರೊ ದಿಟವಿವನು ತಿಳಿಯದೆ
ಬಱಿದೆ ಬಹುದೇ ಭಕ್ತಿಸುಖ ರಾಮಯ್ಯ ಕೇಳೆಂದ [೪೧]

ಜೀವನ್ಮುಕನಾದ ಅಲ್ಲಮನು ಲೋಕದ ಬಳ್ಳಿಗಾಗಿ ತನ್ನ ತತ್ವ ಬೋದನೆ ಉಪಾಸನೆ ಮುಂದುವರಿಸಲು ತೊಡಗುತ್ತಾನೆ. ಮಾಯಾದೇವಿ ಮತ್ತು ಅಲ್ಲಮರು ಸೇರುವ ಸನ್ನಿವೇಶ ಕೇವಲ ಶೃಂಗಾರದ್ದು. ಕೈಲಾಸದಲ್ಲಿ ಪಾರ್ವತಿ ಮಾಡಿದ ಶಪಥಕ್ಕೆ ತಕ್ಕ ಪ್ರತೀಕಾರವು ಶೃಂಗಾರ ಸನ್ನಿವೇಶದಿಂದಲೆ ನಡೆಯಬೇಕಾಗಿರುವುದರಿಂದ ಮಾಯಾವಿಲಾಸ ವಿಡಂಬನಕ್ಕೆ ಇದನ್ನು

೧. ವಚನ ಸಾಹಿತ್ಯ - ಮೌಲ್ಯವಿವೇಚನೆ, ಸಿ.ಪಿ.ಕೆ, ಪುಟ - ೨

ತಂದುಕೊಳ್ಳಲೇಬೇಕಾಯಿತು. "ಯಾವ ಮಾಯೆಯ ಜನನ ಕಾಲದಲ್ಲಿಯೆ ಸಿದ್ಧಸಾಧಕರ ಚಿತ್ತಗಳು ಚಂಚಲವಾಗಿ ಅವರು ವ್ಯಥಿತರಾದರೋ, ಯಾವ ಮಾಯೆ ಯೌವನದ ವಸಂತದಲ್ಲಿ ಸರ್ವಾಲಂಕಾರ ಭೂಷಿತಳಾಗಿ ಒಮ್ಮೆ ಸುಳಿದರೆ ಸಚರಾಚರವೆಲ್ಲ ಪಾದನಖ ಕಾಂತಿಗೆ ಶರಣು ಬೀಳುತ್ತಿದ್ದಿತೋ, ಯಾವ ಮಾಯೆ ಬ್ರಹ್ಮವಿಷ್ಣುಗಳನ್ನು ತೊತ್ತಳ ತುಳಿದು ರುದ್ರಗಣ ಪ್ರಮಥಗಣಂಗಳ ಮರುಳುಮಾಡಿ, ನೊಸಲ ಕಣ್ಣು ಪಂಚಮುಖದವರಿಗೆ ಅರ್ಧಾಂನಿಯಾಯಿತೋ, ಆ ಮಾಯೆ ಲಾಸ್ಯನಿರತಳಾಗಿ ಭಾವಭಂಗಿಗಳ ಚಮತ್ಕಾರ ವೈಖರಿಗಳ ಜಾಲವನ್ನು ಬೀಸಿದರೆ ಸೋಲದವರಾರು! ಅಂತಹ ಮಾಯೆಗೂ ಸೋಲದೆ ಮಾಯಾಕೋಲಾಹಳನಾಗಿರ್ದನೆಂದು ಅಲ್ಲಮನನ್ನು ತೋರಿಸಬೇಕಾಗಿದ್ದರೆ ಶೃಂಗಾರ ಸನ್ನಿವೇಶವು ಇದ್ದಲ್ಲದೆ ಆಗುತ್ತಿರಲಿಲ್ಲ. ಆದರೆ ಆ ಶೃಂಗಾರವು ನಾಯಕ ನಾಯಕಿಯರ ಸಮಾಗಮದಲ್ಲಿ ತೋರಿಬರುವ ಶೃಂಗಾರವಲ್ಲವೆಂದೂ ಯೋಗಿ ಶ್ರೇಷ್ಠನಾದ ನಿರ್ವಿಕಲ್ಪ ಸಮಾಧಿ ಸಾಧಕನಾದ ಅವತಾರ ಪುರುಷನ ಮಾಯಾ ತಿರಸ್ಕಾರದಲ್ಲಿ ತೋರಿಬರುವ ಶೃಂಗಾರವೆಂದೂ ಚಾಮರಸನು ಗ್ರಹಿಸಿ ಅದರಂತೆ ಈ ಸನ್ನಿವೇಶವನ್ನು ಚಿತ್ರಿಸಿದ್ದಾನೆ".[೪೨] ಶಿವ ಕವಿಯಾದ ಚಾಮರಸನು 'ಪ್ರಭುಲಿಂಗಲೀಲೆ'ಯನ್ನು ರಚಿಸಿದ್ದಾನೆ. ಕವಿಯೇ ಹೇಳುವಂತೆ ಅಲ್ಲಮಪ್ರಭು ಲೌಕಿಕನಲ್ಲ ಅಮರ್ತ್ಸ್ಯ ಮಾನವ , ಅನುಪಮ, ಲೋಕೋದ್ಧಾರಕ್ಕಾಗಿ ಶಿವರೂಪಿಯಾದ ಅಲ್ಲಮಪ್ರಭುವಿನ ಲೋಕೋದ್ಧಾರಕ ಲೀಲೆಗಳ ಕಥಾನಕವಿದೆ. ಅಲ್ಲಮನನ್ನು ಕುರಿತು ಕವಿಯು  ಅಲ್ಲಮ ಪ್ರಭುವೆಂದೆನಿಸಿಕೊಂಬುವನು ತಾ ಪ್ರತ್ಯಕ್ಷಪ್ರರಬೊಮ್ಮ  ಎಂದಿದ್ದಾನೆ. ಸಾತ್ವಿಕಾಂಶದ ಅಲ್ಲಮ ಪ್ರಭುವನ್ನು ಗೆಲ್ಲಬಾರದೆ ತಾಮಸಿಕಾಂಶದ ಮಾಯೆ ಕೊನೆಗೆ ಸಾತ್ವಿಕಾಂಶದ ಮಹಾದೇವಿಯಾಗಿ ಜನಿಸಿ ಶಿವನನ್ನು ಒಲಿಸಿಕೊಂಡ ಶಿವೆಯ ಪೈಜೆಯ ಕಥೆ ಪ್ರಭುಲಿಂಗ ಲೀಲೆಯಾಗಿದೆ. ಚಾಮರಸನ  ಪ್ರಭುಲಿಂಗಲೀಲೆ ಯಲ್ಲಿ ಅಲ್ಲಮನ ಪ್ರಾರಂಭದ ಜೀವನ ಚಿತ್ರವನ್ನು ಹೀಗೆ ನೀಡಲಾಗಿದೆ. ಪರಮೇಶ್ವರನ  ನಿಜಸ್ವರೂಪವೇ  ಬಳ್ಳಿಗಾವಿ ಗ್ರಾಮದ ನಿರಹಂಕಾರ–ಸುಜ್ಞಾನಿಯರ ಮಗನಾಗಿ ಅಲ್ಲಮ ಎಂಬ ಅಭಿದಾನದಿಂದ ಬೆಳೆಯಿತು. ಈ ಶಿಶುವಿನ ಪರಿಚಯ ಇಂತಿದೆ. ಆ ದಂಪತಿಗಳು ಯೋಗ ಸಮಾದಿಯಲ್ಲಿದ್ದಾಗ ಶಿಸುವಾಗಿ ಅಲ್ಲಮ ಪ್ರಭುವು ಗೋಚರಿಸುತ್ತಾನೆ.  ಸಗುಣ ನಿರ್ಗುಣ ಮೂರ್ತಿಯಲ್ಲದ ವಿಗಡಶಿಶುವನ್ನು ಆ ದಂಪತಿಗಳು ಕಾಣುತ್ತಾರೆ.

ಸುರರು ಹೂವುಳೆಗಱೆದರಾಗಳು
ನೆರೆದು ನುಡಿದುವು ದೀವದುಂಡುಭಿ
ಪರಮ ಮುನಿಜನದಂತರಂಗದಲಾದುದುತ್ಸಾಹ... [೪೩]

ಆಗ ದೇವತೆಗಳು ಹೂಮಳೆಗರೆದರು. ದೇವದುಂಭಿಗಳು ಮೊಳಗಿದವು. ಮುನಿಜನಗಳ ಮನದಲ್ಲಿ ಉತ್ಸಾಹವುಂಟಾಯಿತು. ಕೇರಿಡುಗಳು ಕೇನರಿದವು. ಕರೆಯದ ಬರಡುಗಳು ಹಯನಾದುವು  ಎನ್ನುತ್ತಾನೆ ಚಾಮರಸ.

ಈತನಾರೆಂದೊಡೆ ಸದಾ ಸಾ
ಕ್ಷಾತವವನಿಜಲಾನಲಾಗಿಲ
ಭೂತತತ್ವವಿದೂರ ಪರಮಾನಂದರಸಭರಿತ
ಜಾತನಲ್ಲ ವಿಚಾರಿಸುವೊಡೆಯ

ಜಾತನಲ್ಲೆಂದೆನುತಲುಪಮಾ
ತೀತನೀ ಶಿಶುವೆಂದ ನಿರಂಹಕಾರ ನಿಜಸತಿಗೆ ''

ಇಂಥ ಅಲೌಕಿಕ ಶಿಶು ಹೇಗಿತ್ತು? ಈ ಶಿಶು ವೇತರೊಳಗಿಹನಲ್ಲಹೊರಗಿಹನಲ್ಲ ಭಾವಿಸಲಲ್ಲದಿರುತಿಹನಲ್ಲು ಎಂದು ತಂದೆತಾಯಿಗಳು ಎಲ್ಲ ಜಾತ್ಯದ ಜಂಜಂಡಂಗಳಲ್ಲೆ್ವನಿಸುವ ಬಾಲಕನಿಗೆ ಅಲ್ಲಮಪ್ರಭುವೆಂದು ಹೆಸರನು ಕೊಟ್ಟರರ್ತಿಯಲಿ.

ಅಲ್ಲಮು ಗಳಿಗೆಯಲ್ಲೇ ನುಡಿ, ನಡೆಕಲಿತು ಬಾಲಕನಾಗಿ ಬೆಳೆಯತೊಡಗಿದ. ಅವನ ಹೊಡೆಚೆಂಡನಾಡುವ ಚಕ್ರವ ತಿರುಹುವ ಬಾಲಲೀಲೆ ಸಹ ಅಲೌಕಿಕವಾಗಿ ತೋರುತ್ತಿತ್ತು. ಅವನು ಓದದಲೆ ವೇದಶಾಸ್ತ್ರನಿಪುಣನಾದ, ವಿದ್ಯೆಯ ವಾರಿಧಿಯಾದ. ರೂಢಿ ಗಚ್ಚರಿಯಾದ ಬಾಲಕ್ರೀಡೆಗಳಿಂದ ಎಲ್ಲರಿಗೂ ಅಚ್ಚರಿ. ಆನಂದವನ್ನುಂಟುಮಾಡಿ ಜನನಿ ಜನಕರಿಗೆ ಕಣ್ಮಣಿಯಾಗಿ ಬೆಳೆದು ನಿಂತ ಅಲ್ಲಮ ಬಾಲಭಾವದ ಪರಿಯ ನಾಘೆಳೆಬಿಸುಟು, ಸಾಕಿನ್ನೆನುತ ವರಗುರು ಶ್ರೀ ಮೂರ್ತಿಯಾಗಿ ಪರಮತತ್ವನಿರೂಪಣೆಯನ್ನು ವಿಸ್ತರಿಸಲುದ್ಯೋಗಿನ – ತೊಡಗಿದಂತೆ ತನ್ನ ತಂದೆ ತಾಯಿಗಳಿಗೆ ಈ ರೀತಿ ಹೇಳಿದ : "ನಿಮ್ಮಯ ಸಮಾಧಿಯ ಕೇಳಿಗೋಸುಗ ಅನುರೂಹಿಸಿ ಬಾಲಭಾವಚ್ಛವಿಯತೋರಿದೆನು, ಇನ್ನು ಸಾಕೆನೆಗೆ ಲೀಲೆಯಿಂದಲಿ ಎನ್ನ ನಿಜದ ನಿರುಳ ನಿಶ್ಚಲ ಸತ್ಯ ಸುಖ ಸಮ್ಮೇಳದಲಿ, ನಾನಾಡುತಿಹೆ". ತಂದೆ ತಾಯಿಗಳು ಒಂದು ಕ್ಷಣ ದಿಘ್ಮೂಡರಾದರು. ಪರಮಾತ್ಮನೇ ಪ್ರತ್ಯಕ್ಷನಾಗಿ ತನ್ನ ಲೀಲೆಯನ್ನು ತೋರಿ ಆಗಲಿದರೆ, ನಾವು ತಮ್ಮ ಸದ್ಗತಿಯನ್ನು ಆಶಿಸಬಲ್ಲೆವೆ? ಎಂದು ತಮ್ಮ ಆತಂಕವನ್ನು ಮಗನಿಗೆ ಅರುಹಿದರು. ಅದಕ್ಕೆ ಅಲ್ಲಮು ಕೊಟ್ಟ ಉತ್ತರ ಸಾಕೇತಿಕವಾಗಿರುವಂತೆ ಮನನೀಯವಾಗಿದೆ :

ಬಗೆಯ ನಿರಹಂಕಾರ ಸುಜ್ಞಾ
ನಿಗಳ ಮೇಳವನೊಲ್ಲದಾ ಪ್ರಭು
ವಗಲಿ ತಾನಿರಬಲ್ಲನೇ?

ನಿರಹಂಕಾರ–ಸುಜ್ಞಾನಿಗಳ ಮೇಳವನ್ನು ತಾನೆಂದಿಗೂ ಅಗಲಿ ಇರಲು ಶಕ್ಯವಿಲ್ಲವೆಂದು ತಂದೆ ತಾಯಿಗಳಿಗೆ ಆಶ್ವಾಸನೆ ಕೊಡುವ ಮಾತಿನಲ್ಲಿ, ಅಲ್ಲಮ ತನ್ನ ಮೂಲದ್ರವ್ಯವಾಗಿರುವ ನಿರಹಂಕಾರ–ಸುಜ್ಞಾನಗಳನ್ನು ಪ್ರಕಟಪಡಿಸಿದಂತೆ ತೋರುತ್ತದೆ. ಅಲ್ಲಮ ತನ್ನ ತಂದೆ ತಾಯಿಗಳಿಗೆ ತತ್ವವಿವೇಕವೆಲ್ಲವನಳವಡಿಸಿ, ಐಕ್ಯಭಾವ ಸ್ಥಳವಕಾಣಿಸಿ ನಿತ್ಯವನು ಲಿಂಗಲೀಲೆಯಲಿ ನೀಡಿದನು.

೨. ಮಾಯೆ :

ಅತ್ತ, ಪಾರ್ವತಿಯ ತಾಮಸಕಳೆ, ಬೆಳುವಲದ ರಾಜಧಾನಿ ಬನವಸೆಯ ಮಮಕಾರ ಭೂಪಾಲ ಹಾಗೂ ಮೋಹಿನಿದೇವಿಯವರಿಗೆ ಮಗಳಾಗಿ ಹುಟ್ಟಿ ಮಾಯೆ ಎಂಬ ಹೆಸರಿನಿಂದ ಬೆಳೆಯತೊಡಗಿದಳು. ದೇವದಾನವ ಮಾನವರುಗಳ ದಾವಣಿಯ ದನವಾಗೆಕಟ್ಟುವ ಭಾವ ಮಾಯಾದೇವಿಯು ಹುಟ್ಟಿದ ಕೂಡಲೇ, ಜನಕೆಲ್ಲ ಮಾಯೆ ಕವಿಯಿತಂತೆ!

ಹುತ್ತು ಬೆಳೆದ ಸಮಾಧಿವಂತರ
ಚಿತ್ತ ಸಂಚಲವಾಗಿ ನೆನಹಿನ ನೇಮ ನೆಲೆಗೆಡಲು

ಎತ್ತಲಿಂದೀ ಮಾಯೆ ಹುಟ್ಟಿತ್ತೆನ್ನುತೆ ಚಿಂತಾಕ್ರಾಂತರಾದಂತೆ [೪೫]

ಸಿಸುವ ನೋಡಿದ ಕಣ್ಗೆ ಮಾಯವೆ
ಮುಸುಕುವುದು ಮನಮೆಚ್ಚುವುದು, ಮೋ
ಹಿಸುವುದೀಪರಿಯಲ್ಲಿ [೪೬]

ಬೆಳೆದ ಮಾಯೆಗೆ ನವ ಯೌವನ ಬಂದಿತ್ತು. ಆತನ ಸತ್ವ ಪರೀಕ್ಷೆಯ ಆಗಳಿಗೆ ಬಂದೇ ಬಿಟ್ಟಿತು. ಒಮ್ಮೆ ಮಾಯೆ ಮಧುಕೇಶ್ವರನ ಪೂಜೆ ಮಾಡೀ ಸಂಗೀತ ಸೇವೆಯನ್ನು ಸಲ್ಲಿಸಿ ರಂಗ ಪ್ರವೇಶಮಾಡಿ ನೃತ್ಯವನ್ನಾರಂಭಿಸಿದಳು.

ಬಳಿಕಲೊಯ್ಯನೆ ಚರಣ ಚಾರಣ
ಚಳತೆಯಲಿ ನಿಜಹಸ್ತವಿಸ್ತರ
ದಳತೆಯಲಿ ಝಳಪಿಸುವ ನೆರಳಿನ ಉಳಿಯ ಹವಣಿನಲಿ
ಘಲಿಘಲಿಸುವಂದುಗೆಯ ಕಂಕಣ
ಗಳ ಝಣತ್ಕಾರದಲಿ ಮಾಯಾ
ಲಲನೆ  ಶೋಭಿಸಿದಳು [೪೭]

ಆ ಶ್ಯಾಮ ಮಾಯಾದೇವಿ,  ಕಾಮಿನಿಯೋ, ತಾ ಭರತ ಸಂಭವ ಭೂಮಿಯೋ ಎಂಬಂತೆ ನೃತ್ಯವನ್ನು ಮಾಡಿದಳು.

ಆಗ, ಸಂಗಿಯಂತಿರೆ ನಟಿಸಿ ತಾ ನಿಸ್ಸಂಗಿಯಾಗಿಹ ಪರಿಯನು , ಆ ನೃತ್ಯಾಂಗನೆಗೆ ತಿಳಿಸಲೆಂದು ಬಂದನಲ್ಲಿಗೆ ಅಲ್ಲಮ ಪ್ರಭು. "ಕಂಗಳಿಂ ನಡೆನೋಡಿದೊಡೆ, ಹೆರೆಹಿಂಗಬಾರದ ಚೆಲುವ ಮುಖದ, ಸುರಂಗಸೂಸುವ ದಂತ ಪಂಕ್ತಿಯ ತೊಳಪಕಣ್ಣುಗಳ, ಕೋಮಳದ ಸರ್ವಾಂಗ ಭಂಗಿಯ" ಸೌಮ್ಯತೆಯನ್ನು ಧರಿಸಬಂದವನು.

ನಾನಾ ಪರಿಯ ವಹಣಿಗಳಿಂದ, ತಾಳಸಮೇಳ ಸದ್ಗತಿಯಿಂದ ಉಗ್ಘಡಣೆಯ ಗಡಾವಣೆಯಿಂದ , ಕೇಳುವವರು ಬೆರಗಾಗೆ ಅಲ್ಲಮ ಹಲವಮ್ದದಲಿ ಮದ್ದಳೆಯ ಬಾರಿಸಿದನು. ಮದ್ದಳೆಯ ಧ್ವನಿ ಹಾಗೂ ಲಯಗಳನ್ನು ಆಲಿಸುತ್ತ ಚಕಿತಗೊಂಡು ಹಿಗ್ಗಿದ ಮಾಯೆಯ ಸ್ಥಿತಿ, ಕಾರ ಮುಗಿಲನ ಗರ್ಜನೆಯ ಕಿವಿಯಾರೆ ಕೇಳುವ ಸೋಗೆ ಯಂತಾಯಿತು. ತನ್ನ ಗೆಳತಿಯರನ್ನು ಕಳಿಸಿ ಆ ಮದ್ದಳೆ ನುಡಿಸುತ್ತಲಿದ್ದ ಅಲ್ಲಮನನ್ನು ಕರೆಸಿಕೊಂಡಳು. ಅವನನ್ನು ನೋಡುತ್ತಲಿದ್ದಂತೆ ಮಾಯೆಗೆ ಆ ರಂಗಮಂಟಪವು ಅನಂಗಮಂಟಪವಾಯಿತು. ಮೊಳೆತವಾಕ್ಷಣ ಕಾಮ ಭಾವದ ಹಳುಕುಗಳು ಹಿರಿದಾಗಿ ಚಿತ್ತಜನಳವಿನಲಿ ಸಿಕ್ಕಿದಳು ಮಾಯೆ ಮಹಾನುರಾಗದಲಿ. ಅವಳ ಅವಸ್ಥೆಯನ್ನು ಕಂಡ ಅವಳ ಕೆಳದಿಯರು ತಮ್ಮ ಚಾತುರ್ಯವನ್ನೆಲ್ಲ ಬಳಸಿ, ಮಮಕಾರ ಭೂಪಾಲನು ಅಲ್ಲಮನನ್ನು ತನ್ನ ಮಗಳಿಗೆ ನಾಟ್ಯಚಾರ್ಯನನ್ನಾಗಿ ನೇಮಕ ಮಾಡುವಂತೆ, ಯಶಸ್ವಿಯಾದರು. ಮಾಯದೇವಿಯ ಹಿಗ್ಗಿಗೆ ಕೊನೆ ಇರಲಿಲ್ಲ.

---

ಆದರೆ, ಅವಳಿಗೆ ತನ್ನ ಕನಸುಗಳು ನನಸಾಗಲಾರವು ಎಂಬುದು ತಿಳಿಯಲು ತಡವಾಗಲಿಲ್ಲ. ಮಾಯೆ ಬೇಟದಲಿ ಕೋಟಲೆಗೊಳ್ಳುತ್ತಲಿದ್ದುದನ್ನು ಕಂಡು ಕನಿಕರಿಸಿ ಅವಳ ಸಖಿಯರು ಉಪಾಯದಿಂದ ಮಾಯೆ ಅಲ್ಲಮರನ್ನು ಏಕಾಂತದಲ್ಲಿ ಕೂಡಿಸಿದರು. ತಮವ ತರುಣಿಯನೊಂದು ಮಾಡುವೆನೆಂಬ ಭಾವ ಭ್ರಮಿತ ಬುದ್ಧಿ ಅವರದಾಗಿತ್ತು, ಮಾಯ ತನ್ನ ಎಲ್ಲ ಸಮ್ಮೋಹಕತೆಯ ಬಲೆ ಬೀಸಿದರೂ ಅಲ್ಲಮ ಅವಳಿಗೆ ದಕ್ಕಲಿಲ್ಲ. ಪ್ರೇಮಾತುರಕ್ಕೆ ವಶವಾಗಿದ್ದ ಮಾಯೆ ಮೇಲು ಬಿದ್ದು ಅವನನ್ನು ಅಪ್ಪಿದಳು. ಆದರೆ, ಅಲ್ಲಮ ಅವಳ ಅಪ್ಪುಗೆಗೆ ಸಿಕ್ಕದೆ ದೂರ ಉಳಿದ. ಬಯಲು ಚಪ್ಪರಿಸುವಂತೆ ಚುಂಬನ, ಬಯಲನಪ್ಪುವೊಲು ಸದುಪ್ಪಿಕೆ, ಬಯಲನೀಕ್ಷಿಸುವಂತೆ ನೋಟದ ಕೂಟದನುಭವಣೆ, ಹತಾಶೆಗೊಂಡ ಮಾಯೆ, ಮೂರ್ಛೆ ಹೋದಳು! ಅಲ್ಲಮನ ಮನ ಒಲಿಸಲು ಮಾಯೆಯ ಸಖಿಯರು ಪಟ್ಟಪ್ರಯತ್ನಗಳೆಲ್ಲ ವ್ಯರ್ಥವಾದವು. ಮಾಯೆಯ ಪರಿಸ್ಥಿತಿ ಇನ್ನು ಕಳವಳಕಾರಿ ಆಯಿತು. ಪಾರ್ವತಿಗೆ ತನ್ನ ಅಣತಿಯ ಮೇರೆಗೆ ಅಲ್ಲಮನನ್ನು ಸೋಲಿಸಲು ಹೋಗಿದ್ದ ತನ್ನ ತಾಮಸ ಕಳೆಯ ರೂಪವಾದ ಮಾಯೆ ಅವನ ಮೋಹದಲ್ಲಿ ತಲ್ಲಣಿಸುತ್ತಿರುವುದನ್ನು ಕಂಡು ಬೇಡವಾಗಿ ಮಾಯೆಗೆ ಬುದ್ಧಿ ಹೇಳಲು ವಿಮಲೆಯನ್ನು ಕಳಿಸಿದಳು.

ಅದರಂತೆ ವಿಮಲೆ ಭೂಲೋಕಕ್ಕೆ ಇಳಿದು ಬಂದು ಮಾಯೆಯನ್ನು ಕಂಡು, ತಾಯಿ ನಿಯಮಿಸಿ ಕಳಿಸಿದ್ದ ಕೆಲಸ ಎಲ್ಲಿ? ಈಗ ನೀನು ಮಾಡುತ್ತಿರುವುದಾದರೂ ಏನು? ಎಂದು ಜಡಿದು ನುಡಿದಳು. ಅದನ್ನು ಕೇಳಿ ಮಾಯೆಯ ಮನಸ್ಸಿಗೆ ತಿಳಿವು ತಿಣ್ಣನೆ ತಿಟ್ಟವಿಟ್ಟಿತು. ತನ್ನ ಪೂರ್ವದ ಕಥನದ ಕಾರಣದ ಅರಿವು ಮೂಡಿ ; ನೆನಪು ಮಿಂಚಿತು. ಪಶ್ಚಾತ್ತಾಪ ಪಡುತ್ತಿದ್ದ ಮಾಯೆಗೆ ವಿಮಲೆ ಸಾಂತ್ವಾನ ನೀಡುತ್ತ ಉಪದೇಶಿಸಿದಳು. ಈಗಲೂ ಕಾಲ ಕೈತಪ್ಪಿಲ್ಲ. ಇನ್ನಾದರೂ ಮದ್ದಳೆಯ ಅಲ್ಲಮನನ್ನು ಗೆದ್ದು ತಾಯೆಯ ಪಣವನ್ನು ಗೆಲ್ಲಿಸು! ಮದ್ದಳೆಯ ಅಲ್ಲಮ, ಈ ಹೆಸರು ಮಾಯೆಯ ಕಿವಿಯ ಮೇಲೆ ಬೀಳುತ್ತಿದ್ದಂತೆ, ಅವಳ ಮೋಹ ದಾಹಗಳು ಮೈಮುರಿದು ಎದ್ದವು. ಅವನೆಲ್ಲಿರುವ? ನನ್ನನ್ನು ಅವನಿದ್ದೆಡೆಗೆ ಕರೆದೊಯ್ಯುವೆಯಾ ವಿಮಲೆ? ಬೇಗ ನನ್ನನು ಕರೆದೊಯ್ಯು ಎಂದು ಬೇಡಿಕೊಂಡಳು.

"ಕರೆದೊಯ್ಯುವೆ, ಆದರೆ ನೀನು ಅವನನ್ನು ಸೋಲಿಸುವ ಪಣ ಗೆಧೆಯಬೇಕೇ ವಿನಃ ನೀನು ಅವನಿಗೆ ಸೋಲಲಿಕ್ಕಲ್ಲ!" ನಾನೇ ಅವನಿಗೆ ಸೋಲಲಿ, ಇಲ್ಲವೇ ಅವನು ನನಗೆ ಸೋಲಲಿ– ನಮ್ಮಿಬ್ಬರ ಸಮಾಗಮವಾದರೆ ಸಾಕು. ತಾಯಿಯ ಪಣ ಗೆದ್ದಂತೆ ಅಲ್ಲವೆ, ವಿಮಲೆ? ಸರಿ, ನಿನ್ನ ಮಾತನ್ನು ಒಪ್ಪಿದೆ. ನಡೆ ಅಲ್ಲಮನೆಡೆಗೆ. ಅಡವಿ ಅಡವಿ ಅಲೆದು, ಅಂತೂ ಕೊನೆಗೊಮ್ಮೆ ಅಲ್ಲಮನನ್ನು ಕಂಡರು. ವಿಮಲೆಯು ಮುಂದಾಗಿ ಮಾತನ್ನು ಆರಂಭಿಸುತ್ತಾಳೆ. ನಿನಗೆ ಉಚಿತವೆ, ಪ್ರಭುವೆ? ವಿಮಲೆಯ ಮಾತಿನೊಂದಿಗೆ ಕೆಳದಿಯರು ದನಿಗೂಡಿಸಿದರು. ಆರು ಮೊದಲಲಿ ಬಯಸ ಹೇಳಿದರು. ಆರು ಕಾಣುತ ಕರೆಸ ಹೇಳಿದರು. ನಾರಿಯರಿಗಿದು ಸಹಜ ಸಂಚಲ ಕಾರಣಿಕತನ. ತನ್ನ ತಾನೇ ದೂರಿಸಿದೊಡೆ ನಾನೇನು ಮಾಡುವೆ ಅಲ್ಲಮ ಉತ್ತರಿಸಿದ. ಧೂರ್ತ! ಈಶಸೇವೆಗೆಂದು ಬಂದಿದ್ದ ಮುಗ್ದೆಯನ್ನು ಜಾಲದಲ್ಲಿ ಸಿಲುಕಿಸಿ ಮೋಸಮಾಡಿದವರಾರು? ಕಿಡಿಕಾರಿದಂತೆ ಮಾಯೆ ಮಾತಾಡಿದಳು. ಮಾಯೆ! ಧೂರ್ಥರು ಯಾರೆಂಬುದನ್ನು ಸಕಲಸಾಧಕ ಸಿದ್ಧಮುನಿಗಳನ್ನು ತಿಳಿದುಕೋ ಎಂದು– ಅಲ್ಲಮನ ಸಲಹೆ ನೀಡಿದ.

---

ನನಗೆ ತಿಳಿಯದೆ ನಿನ್ನ ವಿರತಿ–ಗರತಿ? ಅಲ್ಲಮ, ನೆನಪಿಸು. ನಾನು ಮೂರು ಲೋಕವನ್ನು ಸುತ್ತಿರುವೆ. ಹರಿಯ ಎದೆಯನ್ನು ಮೆಟ್ಟಿದೆನು. ಶಂಕರನ ಅರ್ಧಾಂಗದಲ್ಲಿ ನೆಲೆಸಿರುವೆ: ಬ್ರಹ್ಮನ ಬಾಯಿ ಮುದ್ರಿಸಿರುವೆ. ಸುರನರೋರಗರಂಬೆ ಮರೆವೆಯ ಮರುಳಕಂಡವನ್ನು ಎನ್ನತೊತ್ತುಗಳಿಗೆ ಶರಣು ಹೋಗಿಸಿರುವೆ. ಇಂತಿರಲು ಈನನದ ಮರುಳರನ್ನು ಏನ ಕೇಳುವದಿದೆ? – ಮಾಯೆ ನಿಜ ಪ್ರತಾಪ ಬೀರಿದಳು. ಆದಿ ಅಂತವನರಿಯದೆ ಎಲ್ಲರ ವೇದಿಸಿದೆನು ಎಂದು ಗರ್ವಿಸಿ ಹೊದೆ ಮಾಯೆ! ಮರುಳೆ, ನಿನ್ನನ್ನು ಆದಾರು ಪರಿಪರಿಯಲಿ ಆಡಿಸುವರು ಎಂಬುದನ್ನು ಪರೀಕ್ಷಿಸದೆ ನೀನು ಗರ್ವದಲ್ಲಿ ನುಡಿಯುತ್ತಿರುವೆ ಎಂದು ಅಲ್ಲಮನ ಉತ್ತರ ನೀಡಿದ.

ಯಾರು ಯಾರನ್ನು ಆಡಿಸುವರೆಂಬ ವಿಚಾರ ಇರಲಿ! ನಿನ್ನ ಧೂರ್ತತನವನ್ನು ಬಿಟ್ಟು ಕೃಪಾಕರನಾಗು ಪ್ರಿಯಕರ! ಮಾಯೆಯ ಮನದಾಸೆಯನ್ನು ಈಡೇರಿಸು – ಮೆತ್ತಗಾಗಿ ಮಾಯೆ ಕೋರಿಕೊಂಡಳು. ಸುಮ್ಮನೆ ನನ್ನನ್ನು ಕಾಡದಿರು. ನೀನು ಬೇಡಿ ನನ್ನ ಬೆಂಬತ್ತಿ ಬಂದು ಬಾಡದಿರು ಮಾಯೆ. ನಿನ್ನ ಸಖಿಯರೊಂದಿಗೆ ಹಿಂದಿರುಗಿ ಹೋಗು ಎಂದು ಅಲ್ಲಮ ಸಲಹೆ ನೀಡಿದ.

ನಾನು ನಿನ್ನಲಿ ಸುಖವ ಸುರಿದು, ಸುಮಾನದಲ್ಲಿ ನಿನ್ನಿಂದ ಶಿವತತ್ವಾನುಭವವನ್ನು ಅರಿತು ಶಿವನ ಸನ್ನಿಧಿ ಸೇರಬೇಕೆಂದು ಬಂದಿರುವೆ. ನಿರಾಕರಿಸಬೇಡ! – ಮಾಯೆ ಬೇಡಿಕೊಂಡಳು,

ಶುದ್ಧ ಅಪರಂಜಿ ಮಾತ್ರ ಅಕ್ಕಸಾಲೆಯಲ್ಲಿ ಆಭರಣವಾಗ ಬಲ್ಲುದು, ಮಿಕ್ಕಧಾತುವಲ್ಲ ಅಲ್ಲಮ ಬುದ್ಧಿ ಹೇಳಿದ .

ಈ ಎಲ್ಲವನ್ನು ಸುಮ್ಮನೆ ನಿಂತು ಕೇಳುತ್ತಿದ್ದ ವಿಮಲೆ, ತಾನು ಈಗ ಮಾತಿನಲ್ಲಿ ಪ್ರವೇಶಿಸಲು ಸಾಧ್ಯವೆಂದು, ನಿನ್ನ ಪಾದಸ್ಪರ್ಶದಿಂದ ಮಾಯೆ ಎಂಬ ಕೀಳಗಬ್ಬನ ಸಹ ಖಿನ್ನವಾಗಬಲ್ಲದು. ಅವಳನ್ನು ಕಾಲಕೊದೆಯದೆ ಕರುಣಿಸಿ ಉದ್ಧಾರ ಮಾಡಬೇಕು, ಎಂದು ಪ್ರಾರ್ಥಿಸಿದಳು.

"ವನಿತೆ, ನಿನ್ನ ಮಾತು ಸರಿ, ಕಬ್ಬುನವಾದರೂ ಇದ್ದರೆ ಪರುಷಮುಟ್ಟಿ ಭಿನ್ನವಾಗಬಹುದು. ಆದರೆ ಹಳೆ ಹಂಚು ಎಂದಾದರು ಪರುಷ ಸ್ಪರ್ಶದಿಂದ ಭಿನ್ನವಾದುದ್ದು ಕೇಳಿರುವಿಯಾ?" ಅಲ್ಲಮ ಪ್ರಶ್ನೆ ಹಾಕಿದ.

"ಘನಮಹಿಮೆ! ನಿನ್ನಯ ಪಾದಗಳನ್ನು ಹೇಗಾದರು ಸಂಪಾದಿಸಿದ ಬಳಿಕ ನಿನ್ನ ಕರುಣೆಯಂತೆ ಅವಳ ಕಾದು, ರಕ್ಷಿಸು" ಎಂದು – ಮಧು ರಾವೋದ ವಚನದಲ್ಲಿ ವಿಮಲೆ ಪ್ರಾರ್ಥಿಸಿದಳು.

ಎಂಥ ಮಾತು ಆಡುತ್ತಿರುವೆ? ಎಂದಾದರೂ ತರಣಿ–ತಮಗಳು ಸಂಧಿಸಬಲ್ಲವೆ? ಸಾಕು ಈ ಪ್ರಯಾಸ ಹಿಂದಿರುಗಿ ಹೋಗಿರಿ. ನಾನಂತು ಹೊರಟೆ ಅಲ್ಲಮ ಬುದ್ಧಿವಾದ ಹೇಳಿದ.

ನುಡಿದು ನುಣ್ಣನೆ ನೀನು ಮೆಲ್ಲನೆ ಸಡಿಲಿ ಹೋದರೆ ನಾನು ನಿನ್ನನ್ನು ಬಿಡುವೆನು?

---

ಎಂದು ಮಾಯೆ ಕೊನೆಯ ಪ್ರಯತ್ನವೆಂದು ಅಲ್ಲಮನನ್ನೂ ತನ್ನ ಬಾಹುಗಳಲ್ಲಿ ಬಂಧಿಸುವ ಪ್ರಯತ್ನ ಮಾಡುತ್ತಾಳೆ. ಆದರೆ ಬಯಲನ್ನು ಬಂಧಿಸಬಲ್ಲವನಾರು?
ಆಗಾಗಲೇ ಬಯಲಿಗನಾಗಿದ್ದ ಅಲ್ಲಮ ಅಟ್ಟಹಾಸದಿಂದ ಉಗಘಡಿಸುತ್ತಾನೆ.

ಎಂದೊಡಾನೇನಜುಯೆನಕಟಾ
ಮಂದಮತಿಯೇ ಅಲ್ಲಮಪ್ರಭು
ವೆಂದೆನಿಸಿಕೊಂಬುವನು ತಾ ಪ್ರತ್ಯಕ್ಷ ಪರಬೊಮ್ಮ
ಎಂದು ಹೇಳುವರೆಲ್ಲರಿವನೇ
ಸಂದ ಮದ್ದಳೆಯಲ್ಲಮನು ಬಿಡು
ಹೊಂದದೌ ನೀ ಹೇಳುವುದು ಹುಸಿಯೆಂದಳಾ ಮಾಯೆ ೪೮

ಆಗ, ಸಮೀಪಕ್ಕೆ ಬಂದ ಸೂಜಿಗಲ್ಲನ್ನು ಏರಿ ಮೋಹಿಸುವ ಸೂಜಿಯಂತೆ, ಆ ಸಚ್ಚಿದಾನಂದ ಸ್ವರೂಪಲೆನಿಪನಿತ್ಯನು ಅಲ್ಲಮ ಅಂಶವಾದ ಕಾರಣ ಅಲ್ಲಮನನ್ನೂ ಕಾಣುತ್ತಲೆ, ಅನಿಮಿಷಯ್ಯನ ಕೈಯಲ್ಲಿಯ ಶಿವಲಿಂಗವು ಆ ಕ್ಷಣವೇ ಮೆಲ್ಲನೆ ಮೇಲೆದ್ದು ಬಂದು ಅಲ್ಲಮನನ್ನು ಸೇರಿತು. ನೋಟವೇ ಪ್ರಾಣ ಸ್ವರೂಪ ಕ್ರಿಯೆ ಆದಕಾರಣ ಲಿಂಗ ಕೂಟದೊಡನೆ ಅನಿಮಿಷನ ಜೀವಕಳೆ ಬಂದು ಅಲ್ಲಮನ ದಿವ್ಯ ದೇಹದ ಪೊಟರೆಯಲ್ಲಿ ಸೇರಿತು. ಐಕ್ಯ ಸ್ಥಿತಿಯಲ್ಲಿ ಮಮಕರಿಸಿ, ಮಕರಿಸಿ ಅಲ್ಲಮನು ಮೆರೆದನು.

ಇದೆಲ್ಲವನ್ನು ಸಾಕ್ಷಿಯಾಗಿ ನೋಡುತ್ತಿದ್ದ ಗೊಗ್ಗಯ್ಯನಿಗೆ ಆಶ್ಚರ್ಯ ಉಂಟಾಗಿ ಅಲ್ಲಮನಂತಹ ದಿವ್ಯ ಪುರುಷನ ದರ್ಶನದಿಂದಾಗಿ ತಾನೆಷ್ಟು ಭಾಗ್ಯ ಪಡೆದೆನೆಂಬ ಹಿಗ್ಗಿನಿಂದ, ನಾನು ಸಮೀಪದಲ್ಲಿಯೇ ಶಿವಲಿಂಗ ಭಕ್ತಿಯ ದಾರಿಯನ್ನು ಅನಿಮಿಷನ ಸಾಕಾರದಲ್ಲಿ ಕಂಡರಿದೆ ನಿನ್ನ ಕಾರಣದಿಂದಾಗಿ ಪ್ರಭುವೆ ಎಂದು ನುಡಿಯುತ್ತಾನೆ. ಭೂಮಿಯ ಮೇಲಿನ ಭಕ್ತರನ್ನೂ ರಕ್ಷಿಸೆಂದು ಗೊಗ್ಗಯ್ಯ ಅಲ್ಲಮನನ್ನೂ ಕೋರಿದ. ಅಲ್ಲಮನ ಜೀವನದಲ್ಲಿ ಅದ್ಭುತ ಪರಿವರ್ತನೆಯೊಂದನ್ನು ತರುವುದಕ್ಕೊಸ್ಕರ ಹರಿಹರ ಬಳಸಿಕೊಂಡ ಭೂಗತ ದೇವಾಲಯ ಇಲ್ಲಿ ಗೊಗ್ಗಯ್ಯನಿಗೆ ತತ್ವ ತಿಳಿಸಲೆಂದು ಪ್ರಸ್ತಾಪಿಸುವ ದೃಷ್ಟಾಂತ ಮಾತ್ರವಾಗಿ ಪರಿಣಮಿಸಿದೆ. ಅಲ್ಲಮನಿಗೆ. ಎರಡು ಸನ್ನಿವೇಶಗಳಲ್ಲಿ ಇರುವ ಅಂತರ ಅಜಗಜಾಂತರ. ಇನ್ನೊಂದು ಅಶ್ಚರ್ಯವನ್ನು ಗಮನಿಸದೆ ಇರಲಾಗದು. ಅದೇನೆಂದರೆ, ಗೊಗ್ಗಯ್ಯನಿಗೆ ಕೇವಲ ದೃಷ್ಟಾಂತವಾಗಿದ್ದ ಅನಿಮಿಷಯ್ಯ ಅಲ್ಲಮನನ್ನೇ ತನ್ನ ಶಿಷ್ಯನನ್ನಾಗಿ ಮಾಡಿಕೊಳ್ಳುವುದು.

ಹರಿಹರ ಕವಿಯು ಅನಿಮಿಷಯ್ಯನ ಪ್ರಸಂಗವನ್ನೂ ಕಾಮಲತೆ ಕಾಲವಾದ ತರುಣದಲ್ಲಿಯೇ ತಂದರೆ ಚಾಮರಸನು ಅಲ್ಲಮಪ್ರಭು ಮಾಯೆಯನ್ನೂ ಜಯಿಸಿದ ಬಳಿಕ, ಬಸವಾದಿ ಪ್ರಮಥರು ಧರೆಗಿಳಿದುದನ್ನೂ ಬಸವಾದಿ ಪ್ರಾರಂಭಿಕ ಜೀವನವನ್ನು ವರ್ಣಿಸಿದ ನಂತರ ಅಲ್ಲಮನನ್ನೂ ಅನಿಮಿಷಯ್ಯನ ಬಳಿಗೆ, ಅದೂ ಗೊಗ್ಗಯ್ಯನಿಗೆ ದೃಷ್ಯಾಂತವನ್ನು ನೀಡುವ ನೆಪದಲ್ಲಿ ತರುತ್ತಾನೆ. ನಟನೆಗಾಗಿಯಾದರೂ ಅಲ್ಲಮ ಅನಿಮಿಷನ ಶಿಷ್ಯನಾಗುತ್ತಾನೆ. ಅಲ್ಲಮನೆ ಸೂಜಿಗಲ್ಲು, ಅನಿಮಿಷನೆ ಲಿಂಗವೆ ಸೂಜಿ ಎಂಬ ಮಾತನ್ನು ಬಳಸಿ ಚಾಮರಸನು ಅಲ್ಲಮನನ್ನೂ ಅನಿಮಿಷನ ಶಿಷ್ಯನನ್ನಾಗಿ ಮಾಡಿದ್ದಾನೆ. ಅನಿಮಿಷನ ಪ್ರಸಂಗದಿಂದ ಅಲ್ಲಮನ ಪರಿಪೂರ್ಣತೆಯ ಪ್ರಮಾಣ

ಪ್ರಾರಂಭವಾಯಿತು ಎನ್ನಬಹುದು.

ಜಗದ ಭಕ್ತರದಾವ ಮುಖದಲಿ
ಹೊಗುತಲಿರ್ದರು ತಾನು ಬಳಿಕಾ [೪೯]

ಆಡಿ ಕೆಲರಿಗೆ ಕರುಣದಲಿ ಮಾ
ತಾಡಿ ಕೆಲರಿಗೆ ನುಡಿಸಿ ಕೆಲರಿಗೆ
ನೋಡಿ ಕೆಲರಿಗೆ ಜಱೆದು ಕೆಲರಿಗೆ ಜಡಿದು ಕೆಲಬರಿಗೆ
ಹಾಡಿ ಕೆಲರಿಗೆ ಹರಸಿ ಕೆಲರಿಗೆ
ಕೂಡಬಲ್ಲನು ನಿತ್ಯಸುಖವನು
ರೂಢಿಯೊಳು ಘನಮಹಿಮನೆಮ್ಮಯ ಗುರು [೫೦]

ಹೀಗೆ ಅಲ್ಲಮ ಪ್ರಭುವಿನ ಪಾತ್ರವು ತನ್ನ ಭಕ್ತರನ್ನು ಉದ್ಧರಿಸುತ್ತಾ ಪರಿಪೂರ್ಣತೆಯ ಕಡೆಗೆ ನಡೆಸಿರುವುದನ್ನು ಮೇಲಿನ ಹಲವು ಪ್ರಸಂಗಗಳಿಂದ ಅರಿತುಕೊಳ್ಳಬಹುದು.

## ಈ) ಪವಾಡಗಳು :

ಚಾಮರಸ ಕವಿಯ 'ಪ್ರಭುಲಿಂಗಲೀಲೆ'ಯಲ್ಲಿ ಮತ್ತು ಹರಿಹರನ 'ಪ್ರಭುದೇವರ ರಗಳೆ'ಯಲ್ಲಿ ಹಲವು ಪವಾಡಗಳು ಕಂಡುಬರುತ್ತವೆ. ಹರಿಹರನ ಇತರ ರಗಳೆಗಳಾದ 'ಬಸವರಾಜ ದೇವರ ರಗಳೆ', 'ಬಾಹೂರ ಬೊಮ್ಮಯ್ಯನ ರಗಳೆ', 'ಏಕಾಂತರಾಮಯ್ಯನ ರಗಳೆ', 'ರೇವಣ್ಣ ಸಿದ್ಧನ ರಗಳೆ', 'ಕೆಂಬಾವಿ ಬೋಗಣ್ಣನ ರಗಳೆ', 'ಕರಿಕಾಲೆಮ್ಮೆಯ ರಗಳೆ', 'ನಂಬಿಯಣ್ಣನ ರಗಳೆ' – ಮುಂತಾದುವುಗಳಲ್ಲಿ ವೈವಿಧ್ಯಮಯ ಪವಾಡಗಳು ನಡೆಯುತ್ತವೆ. ಪ್ರಭುದೇವರ ರಗಳೆಯಲ್ಲಿ ಈ ಮೇಲಿನ ರಗಳೆಗಳಲ್ಲಿ ಗೋಚರಿಸುವಂತೆ ಹಲವು ಪವಾಡಗಳು ಕಂಡುಬರುವುದಿಲ್ಲ. ಆದರೆ ಪ್ರಭುದೇವ ಕಾಮಲತೆ ಸತ್ತ ನಂತರದಲ್ಲಿ ವಿರಕ್ತನಾಗಿ ಸುತ್ತಾಡುತ್ತಿದ್ದು ಆತ ಶಿವಾಲಯುವನ್ನು ಪ್ರವೇಶಿಸುವ ಸಂದರ್ಭ ಕೂಡ ಪವಾಡ ಸದೃಶವಾಗಿದೆ. ಅನುಭವಮಂಟದಲ್ಲಿ ಬಸವಣ್ಣ ಲಕ್ಷಾಂತರ ಮಂದಿ ಶರಣರಿಗೆ ಮಾಡಿಸಿದ್ದ ಆಹಾರವನ್ನೆಲ್ಲ ಪ್ರಭುಲಿಂಗನು ತಾನೊಬ್ಬನೇ ಆರೋಗಣೆ ಮಾಡಿದ್ದು ಮುಖ್ಯವಾದ ಪವಾಡವಾಗಿದೆ. ಪ್ರಭುದೇವನೆ ಶಿವನಾದುದರಿಂದ ಇಂಥ ಪವಾಡ ಮಾಡಲು ಸಾಧ್ಯವಗುತ್ತದೆ. ಇದೇ ರೀತಿ ಗೋರಕ್ಷಾ ಕತ್ತಿಯಿಂದ ಪ್ರಭುವಿನ ದೇಹಕ್ಕೆ ಹೊಡೆದಾಗ ಆ ಕತ್ತಿ ದೇಹವನ್ನು ತೂರಿ ಬರುವುದು, ಬಯಲಿಗೆ ಹೊಡೆದಂತೆ ಆಗುವುದು, ಪ್ರಭು ದೇಹವಿದ್ದು ನಿರ್ದೇಹಿಯಂತೆ ಕಾಣುವುದುಪ್ರಭುವಿನ ಪವಾಡ ಗಾಢವಗಿ ಗೋಚರವಾಗುತ್ತದೆ. ಇಂಥ ಪವಡಗಳಿಂದ ಕಥೆಯ ನಾಯಕನ ಪಾತ್ರಕ್ಕೆ ವಿಶೇಷ ಮೆರಗು ಬಂದು, ಆತನ ವ್ಯಕ್ತಿತ್ವ ಉಳಿದವರಿಗಿಂತ ಭಿನ್ನವಾಗಿ, ಲೋಕದ ಕಣ್ಣಿನಲ್ಲಿ ಆತನನ್ನು ಮಹಿಮನನ್ನಾಗಿಸುತ್ತದೆ.

## ಉ) ಅಭಿವ್ಯಕ್ತಿ :

### ೧. ಹರಿಹರನ ಶೈಲಿಯ ವಿಶಿಷ್ಟತೆ, ರಸಗಳು

ಹರಿಹರನು 'ಕ್ರಾಂತಿಕವಿ'ಯೆಂದು ಖ್ಯಾತನಾಗಿದ್ದಾನೆ. ವೀರಶೈವ ಕವಿಗಳಿಗೆ 'ಆಚಾರ್ಯ ಪುರುಷ'ನೆಂದು ಹೆಸರಾಗಿದ್ದಾನೆ. ಹರಿಹರನ ತರುವಾಯ ಬಂದ ವೀರಶೈವ ಕವಿಗಳಲ್ಲಿ ಅವನನ್ನು ಕೊಂಡಾಡದವರೇ ಅಪರೂಪ. ರಗಳೆಯ ಪ್ರಾರಂಭದಲ್ಲಿ ತಪ್ಪದೆ ಕಂದಪದ್ಯ ಮತ್ತು ಮುಕ್ತಾಯದಲ್ಲಿ ಒಂದು ಕಂದಪದ್ಯ ಇರುತ್ತದೆ. ರಗಳೆ ಕಥಾನಕವಿದ್ದರೆ ಸಾಮಾನ್ಯವಾಗಿ ಪ್ರಾರಂಭದ ಕಂದದಲ್ಲಿ ಕಥಾನಾಯಕನನ್ನು ಮೆರೆದ ಪಂಪಾವಿರೂಪಾಕ್ಷನ ಸ್ತೋತ್ರವಿರುವುದು. ಈತನ ಶೈಲಿ ಕುರಿತು ಒಂದು ಅಭಿಪ್ರಾಯ ಹೀಗಿದೆ : "ಚಿತ್ರಮಯವಾದ ಶೈಲಿ ದೊಡ್ಡ ಕವಿಯ ಹುಟ್ಟು ಆಸ್ತಿ. ಹರಿಹರನ ರಗಳೆಗಳು ಒಂದೊಂದೂ ಹಲವು ಚಿತ್ರಗಳ ಸುರುಳಿ. ಅವನ್ನು ಬಿಚ್ಚಿ ವೇಗವಾಗಿ ತಿರುಗಿಸುತ್ತಾನೆ ಅವನು. ಕಣ್ಣಮುಂದೆ ಚಿತ್ರಗಳ ಮಾಲೆ ಸಜೀವಾಗಿ ಸಂಚಾರ ಮಾಡುತ್ತದೆ. ಚಲನಚಿತ್ರ ನೋಡಿದಂತೆ ಅನುಭವವಾಗುತ್ತದೆ" [೫೧] ರಗಳೆಗಳನ್ನು ಓದುವಾಗ ಈ ಅನುಭವ ಸಾಮಾನ್ಯವಾಗಿ ದೊರಕುತ್ತದಾದರೂ ಪ್ರಭುದೇವರ ರಗಳೆ ಯಿಂದ ಒಂದು ನಿದರ್ಶನವನ್ನು ಇಲ್ಲಿ ಉದಾಹರಿಸಬಹುದು.

ಬರೆದಂತೆ ಕಂಡರಸಿದಂತೆ ಕರುವಿಟ್ಟಂತೆ
ಮರುಳಂತೆ ಮಱೆದಿರ್ದರಂತೆ ಮರವಟ್ಟಂತೆ
ಉರವಣೆಯ ದು:ಖದೊಳಗೆಱಗಿ ಬಿಸುಸುಯ್ವುತಂ
ಪರಿಪರಿಯ ವಿರಹಾಗ್ನಿಯಿಂದುರಿದು ಬೇವುತಂ
ನಿಂದನಲ್ಲಮನೊಳಗೊಳಗಗಳಲ್ದು ಬಳಲುತಂ
ಸಂದನೇಹದ ಸದ್ಗುಣಂಗಳಂ ನೆನೆವುತಂ
ಕಾಮಲತೆ ಮತ್ತೆ ಮನವಂ ಸುತ್ತಲಲ್ಲಮಂ
ಕಾಮಲತೆ ಕಾಮಲತೆಯೆನುತಿರ್ದನಲ್ಲಮಂ [೫೨]

ಹರಿಹರನದು ಸ್ವತಂತ್ರ ಮನೋಧರ್ಮ, ಹೊಸ ಜಾಡನ್ನು ಹಿಡಿದು ನಡೆಯುವುದು ಅವನ ಅಗ್ಗಳಿಕೆ. ಕಾವ್ಯವಸ್ತು, ಕಾವ್ಯೋದ್ದೇಶ, ಭಾಷೆ, ಛಂದಸ್ಸು ಮೊದಲಾದ ಅಂಶಗಳಲ್ಲಿ ಅವನು ತನ್ನ ವ್ಯಕ್ತಿತ್ವದ ಮುದ್ರೆಯನ್ನೊತ್ತಿದ್ದಾನೆ. ಹರಿಹರನ ಶೈಲಿ ಶೃಂಗಾರಕ್ಕೆ ಒಪ್ಪುವುದಿಲ್ಲವೆಂದೂ ವೀರರಸ ಭಕ್ತಿರಸಗಳಿಗೆ ಅದು ಸಮುಚಿತವೆಂದೂ ತೋರುತ್ತದೆ.

ಹರಿಹರ ಕಂಡಿರುವುದು ನಿಸ್ಸೀಮ ಭಕ್ತಿಶ್ರೇಷ್ಠತೆ ಹಾಗೂ ಶಿವನ ಬಗ್ಗೆ ತಳೆದ ಕಡು ನಿಷ್ಠೆಗಳನ್ನು ಮಾತ್ರ. "ಶಿವಭಕ್ತಿ ಈ ಎಲ್ಲ ಕೃತಿಗಳ ಪ್ರಾಣ, ಜೀವಾಳ; ರಸ ಭಕ್ತಿರಸ" ಎಂಬ ಎಚ್.ದೇವೀರಪ್ಪನವರ ಅಭಿಪ್ರಾಯವೊಂದನ್ನು ಇಲ್ಲಿ ನೆನೆಯಬಹುದು.[೫೩] ಹರಿಹರನ ಪ್ರಭುದೇವರ ರಗಳೆಯಲ್ಲಿ ಲಲಿತ ರಗಳೆಯನ್ನು ಬಳಸಿದ್ದಾನೆ. ಲಲಿತರಗಳೆ ಛಂದಸ್ಸಿನ ನಡೆ ಗಂಭೀರವಾಗಿದೆ, ನಿಧಾನವಾಗಿದೆ ಕೆಲವೊಮ್ಮೆ ಆಡು ಮಾತಿನ ಶೈಲಿಯಲ್ಲಿ ಸಮ್ಮಿಳಿತವಾಗಿದೆ. ಭಾವ ಮತ್ತು ನಾದಗಳು ಸಮ್ಮಿಳನಗೊಂಡು ತುಂಬು ಹೊಳೆಯಾಗಿ ಹರಿಯುವುದನ್ನು ಪುಷ್ಪರಗಳೆಯ ತುಂಬ ನೋಡ ಬಹುದು. ಹಾಗೆಯೇ ಈ ಛಂದಸ್ಸಿನ ಭಾವನಾದಗಳನ್ನು ಪ್ರಭುದೇವರ ರಗಳೆಯಲ್ಲಿ

ಮತ್ತು ಕರಿಕಾಲಮ್ಮೆಯರಗಳೆ, ಅತಿಭಕ್ತನ ರಗಳೆ, ಕಣ್ಣಪ್ಪನರಗಳೆ, ತಿರುನೀಲಕಂಠ ದೇವರ ರಗಳೆ ಮೊದಲಾದ ಕೃತಿಗಳಲ್ಲಿ ನೋಡಬಹುದಾಗಿದೆ.

ಶೈಲಿ ವ್ಯಕ್ತಿವಿಷಯಕರವಾಗಿರುವುದು. ಗ್ರಂಥಕರ್ತೃವಿನ ಮನೋಧರ್ಮ, ಆತ್ಮಸಂಸ್ಕಾರ, ಬಾಳಿನ ದರ್ಶನ, ಜೀವನದ ರುಚಿ ಕಹಿಗಳಿಗೆ ಅನುಗುಣವಾಗಿ ಆತನ ಶೈಲಿಯು ರೂಪಗೊಳ್ಳುವುದು. ಕಾವ್ಯಪರಿಣತಿಯನ್ನು ಸಾಧಿಸಿದ ಆವುದೇ ಕವಿಯ ಶೈಲಿಯ ಮುಖ್ಯ ಲಕ್ಷಣಗಳನ್ನು ಒಮ್ಮೆ ತಿಳಿದುಕೊಂಡಮೇಲೆ ಆತನ ಹೆಸರನ್ನು ತಿಳಿದುಕೊಳ್ಳದೆ ಅವನ ಕೃತಿಗಳನ್ನು ಶೈಲಿಯ ಮುಖಾಂತರವೆ ಗುರುತಿಸಲು ಸಾಧ್ಯವಿದೆಯೆಂಬುದನ್ನು ಪಂಡಿತರು ಸಿದ್ಧಮಾಡಿ ತೋರಿಸಿದ್ದಾರೆ. ಷೇಕ್ಸ್‌ಪಿಯರ್, ಭಾಸ, ಕಾಲಿದಾಸಾದಿಗಳ ಕಾವ್ಯಕರ್ತೃತ್ವದ ವಿಷಯದಲ್ಲಿ ಶೈಲಿಯೊಂದು ಮಹತ್ವದ ಸಾಧನವಾಗಿದ್ದನು ನಾವು ಕಾಣುತ್ತೇವೆ. "ಸಡಗರದ ಸಾಹಸಿಯೆಂದು ಅವನನ್ನು ನಿರ್ದೇಶಿಸುವುದು ಪ್ರಾಯಶ: ಸರಿಯಾದ ಮಾತು. ಪ್ರಣ್ಯಾಂಗನಾವೀಧಿಯ ಅನೇಕ ಮದನಮಹೋತ್ಸವಂಗಳಾಗಲಿ ಅಲ್ಲಮ ಕಾಮಲತೆಯರ ದಾಂಪತ್ಯ ಸೌಖ್ಯವಾಗಲಿ............ ತಾನೇ ಘೋಷಿಸಿರುವ ಈ ಕಾವ್ಯಮಂ ಬಿತ್ತರದಿಂ ತಾನೊಲ್ದು ಪೇಳ್ದಿಂ ಶಿವಕವಿ ಹರಿದೇವಂ ಮಹೋತ್ಸಾಹದಿಂದಂ" ಎಂಬ ಮಾತು ಅಕ್ಷರಶ: ಸತ್ಯ; ಅವನ ಸಮಸ್ತ ಕಾವ್ಯಗಳಿಗೂ ಏಕರೀತಿಯಲ್ಲಿ ಅನ್ವಯವಾಗಲು ಯುಕ್ತ."[೫೪]

ಹರಿಹರನ ಮನಸ್ಸನ್ನು ಸೆರೆಹಿಡಿದಿರುವ ಛಂದಸ್ಸೆಂದರೆ ಲಲಿತ ರಗಳೆ, ತನ್ನ ನೂರಾರು ರಗಳೆಗಳಲ್ಲಿ 80 ಕಾವ್ಯಗಳನ್ನು ಲಲಿತರಗಳೆಯ ಛಂದಸ್ಸಿನಲ್ಲಿಯೇ ರಚಿಸಿದ್ದಾನೆ. ಈ ದೃಷ್ಟಿಯಿಂದ ಲಲಿತರಗಳೆ ಹರಿಹರ ಕವಿಯ ಮೊದಲನೆಯ ಆಯ್ಕೆಯಾಗಿದೆ. ಅತ್ಯಂತ ಪ್ರಮುಖವಾದ ಹಾಗೂ ದೊಡ್ಡದಾದ ಕಾವ್ಯಗಳೆಲ್ಲಾ ಈ ಛಂದಸ್ಸಿನಲ್ಲಿಯೇ ಇವೆ. ಪ್ರತಿಪಾದದಲ್ಲಿಯೂ 5 ಮಾತ್ರೆಯ ನಾಲ್ಕು ಗಣಗಳಿರುವುದು ಲಲಿತ ರಗಳೆ ಛಂದಸ್ಸಿನ ಲಕ್ಷಣ. ಸಾಮಾನ್ಯವಾಗಿ ಇದು ಅಂತ್ಯಪ್ರಾಸಸಿಂದ ಕೂಡಿರುತ್ತದೆ. ಇಷ್ಟೊಂದು ಹೆಚ್ಚಿನ ಸಂಖ್ಯೆಯ ಕಾವ್ಯಗಳಲ್ಲಿ ಈ ಛಂದಸ್ಸನ್ನು ಹರಿಹರ ಬಳಸಿರುವುದನ್ನು ಕಂಡಾಗ ಅದು ಅವನಲ್ಲಿ ಅತಿ ಹೆಚ್ಚಿನ ಪ್ರಾಶಸ್ತ್ಯವನ್ನು ಪಡೆದುಕೊಂಡಿರುವುದು ವೇದ್ಯವಾಗುತ್ತದೆ. ಈ ಬಗ್ಗೆ ಕೊಟ್ಟಿರುವ ಕೆಲವು ವಿದ್ವಾಂಸರ ಅಭಿಪ್ರಾಯಗಳನ್ನು ಇಲ್ಲಿ ಉದ್ಧರಿಸಲಾಗಿದೆ.

ಶ್ರೀ ಡಿ.ಎಸ್.ಕರ್ಕಿ ಅವರ ಅಭಿಪ್ರಾಯದಂತೆ, ಲಲಿತರಗಳೆಯ ಗತಿ ನಿಧಾನವಾದುದು, ಭಾವ ಮತ್ತು ನಾದ ತುಂಬುಹೊಳೆಯಾಗಿ ಹರಿಯುವುದಕ್ಕೆ ಲಲಿತದಷ್ಟು ಅನುಕೂಲವಾದ ಛಂದೋಬಂಧ ಬೇರೊಂದಿಲ್ಲವೆಂದೇ ಹೇಳಬಹುದು. ಕಥೆ ಸರ್ವಾಂಗ ಸುಂದರವಾಗಿ ನಿರ್ಮಾಣವಾಗುವಂತೆ ಅದರಲ್ಲಿ ಆಪದವುಂಟು? ಹರಿಹರನಿಗೆ ಲಲಿತ ರಗಳೆಯ ಪಂಚಮಾತ್ರಾಗಣದ ಗಂಭೀರ ಗತಿ ಕಥನಕ್ಕೆ ಹೆಚ್ಚು ಆವಶ್ಯಕ ಹಾಗೂ ಯೋಗ್ಯವೆನಿಸಿರಬೇಕು. ಶಿವಶರಣ ಕಥೆಗಳಲ್ಲಿ ಕಥಾನಾಂಶವೇ ಹೆಚ್ಚಾಗಿರುವುದರಿಂದ ಲಲಿತರಗಳೆ ಅವನಿಂದ ಹೆಚ್ಚಾಗಿ ಪುರಸ್ಕರಿಸಲ್ಪಟ್ಟಿತು. ನಂಬಿಯಣ್ಣನ ರಗಳೆ, ಬಸವ ರಾಜದೇವರ ರಗಳೆ, ಮಹಾದೇವಿಯಕ್ಕನ ರಗಳೆ – ಇವು ಹರಿಹರ ಲಲಿತ ರಗಳೆಯ ಉಚ್ಚತಮ ಶೈಲಿಗೆ ಉದಾಹರಣೆಯಾಗಿವೆ[೫೫] ಎಂದು ಹಿರೇಮಲ್ಲೂರ ಈಶ್ವರನ್ ಹೇಳುತ್ತಾರೆ.

ಹರಿಹರನು ರಗಳೆಯ ಕಾವ್ಯಗಳಲ್ಲಿ ಗದ್ಯಪದ್ಯಗಳೆರಡನ್ನೂ ಬಳಸಿಕೊಂಡಿರುವನು. ಆದರೆ, ಪ್ರಭುದೇವರ ರಗಳೆಯಲ್ಲಿ ಮಾತ್ರ ಕೇವಲ ಒಂದೇ ಒಂದು ಸ್ಥಲದಲ್ಲಿ ಪೂರ್ತಿಯಾಗಿ ಪದ್ಯದಲ್ಲಿಯೇ ಅಂದರೆ ರಗಳೆಯಲ್ಲಿಯೇ ಪೂರ್ಣಗೊಳಿಸಿರುತ್ತಾನೆ. ಉಳಿದಂತೆ ಇನ್ನಿತರ ರಗಳೆಗಳಲ್ಲಿ ಗದ್ಯ ಮತ್ತು ಪದ್ಯವನ್ನು ಒಂದೊಂದು ಸ್ಥಲಗಳಲ್ಲಿ ಬಳಸಿರುವುದು ಕಂಡುಬರುತ್ತದೆ. ಆತನಿಗಿಂತಲೂ ಪೂರ್ವದಲ್ಲಿ ಚಂಪೂಕಾವ್ಯಗಳಲ್ಲಿ ನಮ್ಮ ಕವಿಗಳು ಗದ್ಯವನ್ನು ವೈವಿಧ್ಯಕ್ಕೆಂದು ಬಳಸುತ್ತಿದ್ದರು. ಆದರೆ ಹರಿಹರನಾದರೋ ಅದಕ್ಕೆ ಒಂದು ವಿಶಿಷ್ಟ ಸ್ಥಾನವನ್ನು ಒದಗಿಸಿಕೊಟ್ಟನು. ಹರಿಹರನ ರೂಪಕ ಶೈಲಿಯಲ್ಲಿ ಶಿವಮಯವಿದೆ, ಅಸಾಧಾರಣತೆಯಿದೆ. ಏಕೆಂದರೆ ಅವನ ಕಲ್ಪನೆ ದೈವೀಸ್ವರೂಪವಾದದ್ದು, ಭವ್ಯವಾದದ್ದು ಆಗಿರುತ್ತದೆ. ಹರಿಹರಕವಿಯ ಶೈಲಿ ಆತನ ಉನ್ನತ ಸಂಸ್ಕಾರದಿಂದ ರೂಪುಗೊಂಡಿದ್ದಾಗಿರುತ್ತದೆ. ಅವನ ಅಭಿರುಚಿಯೆ ಆತನ ಶೈಲಿ. ರೀತಿರಾತ್ಮಾ ಕಾವ್ಯಸ್ಯ ಎಂಬ ವಾಮನನ ಮಾತು ಹರಿಹರನಿಗೆ ತುಂಬ ಅನ್ವಯಿಸುತ್ತದೆ. ಕಾಮಲತೆಯು ಸತ್ತಾಗ ಅಲ್ಲಮನ ಸ್ಥಿತಿಯನ್ನು ಈ ಮಾತುಗಳು ಸ್ಪಷ್ಟಪಡಿಸುತ್ತವೆ.

ಯಾವುದೇ ಕೃತಿ ಉತ್ತಮ ಎನ್ನಿಸಿಕೊಳ್ಳಬೇಕಾದರೆ ಅದರ ವಸ್ತು, ಕಥಾಸಂವಿಧಾನ, ಅಂತರ್ಗತದರ್ಶನ ಹಾಗೂ ಒಟ್ಟಾರೆ ಕಲಾತ್ಮಕ ಅಭಿವ್ಯಕ್ತಿ ಎಷ್ಟು ಮುಖ್ಯವೋ ಅಷ್ಟೇ ಅಥವಾ ಇನೂ ಒಂದು ಕೈ ಮೇಲಾಗಿ ಬಳಕೆಯಾಗಿರುವ ಭಾಷೆ ಹಾಗೂ ಶೈಲಿ ಮುಖ್ಯವಾಗುತ್ತವೆ ಎಂಬುದು ಈಗಾಗಲೇ ಸಾಬೀತಾಗಿರುವ ಸರ್ವಸಮ್ಮತ ಅಭಿಪ್ರಾಯ. ಏಕೆಂದರೆ ಸಾಹಿತ್ಯ ಕೃತಿಯ ಮೂಲದ್ರವ್ಯವೆಲ್ಲ ಅಭಿವ್ಯಕ್ತಗೊಳ್ಳಬೇಕಾಗಿರುವುದು ಭಾಷೆಯ ಮುಖಾಂತರವೇ. ಭಾಷೆ ಅವುಗಳಿಗೆಲ್ಲಾ ತಾಯಿ ಬೇರಿದ್ದಂತೆ. ಆದ್ದರಿಂದ ಒಂದು ಕೃತಿಯ ಸೋಲು ಅಥವಾ ಗೆಲುವು ಅದರಲ್ಲಿ ಬಳಕೆಯಾಗಿರುವ ಭಾಷೆಯ ಸೋಲು ಅಥವಾ ಗೆಲುವು ಆಗುತ್ತದೆ ಎಂಬ ಸತ್ಯವನ್ನು ಯಾರೂ ಸಂಪೂರ್ಣವಾಗಿ ಅಲ್ಲಗಳೆಯಲು ಸಾಧ್ಯವಿಲ್ಲ. ಮಹತ್ವದ ಕವಿ ಎನ್ನಿಸಿಕೊಂಡವನು ಭಾಷೆಯನ್ನೂ ಸಮರ್ಥವಾಗಿ ದುಡಿಸಿಕೊಂಡು ಉದ್ದೇಶಿತ ಪರಿಣಾಮವನ್ನು ಉಂಟುಮಾಡುತ್ತಾನೆ. ಹಾಗೆ ಸಮರ್ಥವಾಗಿ ದುಡಿಸಿಕೊಳ್ಳಬೇಕಾದರೆ, ಅವನಿಗೆ ಭಾಷೆಯ ಮೇಲೆ ಹೆಚ್ಚಿನ ಹಿಡಿತವಿರಬೇಕು.

ಪರಮ ತತ್ವಾಕಾರನಾಗಿರ್ದನಲ್ಲಮಂ
ನಿರುಪಾಧಿಕಜ್ಯೋತಿಯಾಗಿರ್ದನಲ್ಲಮಂ
ಇಂತು ಭಕ್ತರ ಪುಣ್ಯಲೀಲೆಯಂ ನೋಡುತಂ
ಸಂತತಂ ನತಜನವನೊಲ್ದು ಕೊಂಡಾಡುತಂ
ಕಾಮಕಾನನ ದವಾನಳರೂಪನೊಪ್ಪಿದಂ
ಸೋಮಸೂರ್ಯಾಗ್ನಿ ನೇತ್ರತ್ರಯನು ಒಪ್ಪಿದಂ
ಗಿರಿಜಾಮುಖಾಬ್ಜ ಭಾಸ್ಕರರೂಪನೊಪ್ಪಿದಂ
ಗುರುಮೂರ್ತಿ ಹಂಪೆಯ ವಿರೂಪಾಕ್ಷನೊಪ್ಪಿದಂ [೫೬]

ಈ ಮಾತುಗಳು ಹರಿಹರನ ಶೈಲಿಗೆ ಉತ್ತಮ ನಿದರ್ಶನವಾಗಿವೆ. ಕನ್ನಡ ಸಾಹಿತ್ಯದ ಮಾರ್ಗವನ್ನೇ ಬದಲಿಸಿದ ಯುಗ ಪುರುಷ. ಹಳೆಯದನ್ನೂ ಉಪಯುಕ್ತವಲ್ಲದುದನ್ನೂ ಪ್ರತಿಭಟಿಸಿ, ಹೊಸತನ್ನೂ ಸರ್ವಜನೋಪಯೋಗಿಯಾದುದನ್ನೂ ನಿರ್ಮಿಸಿದ ಎದೆಗಾರ. ಪರಂಪರೆಯನ್ನು

ವಿರೋಧಿಸುವವರಿಗೆ, ನೂತನಮಾರ್ಗ ಹುಡುಕುವವರಿಗೆಲ್ಲ ಹರಿಹರನು ಶಿಕ್ಷಾ ಗುರುವಾಗಿ ನಿಂತಿದ್ದಾನೆ. ಹೀಗಾಗುವುದಕ್ಕೆ ಕಾರಣಗಳು ಎರಡು : ಒಂದು ಆತನ ಜೀವನ ದೃಷ್ಟಿ, ಇನ್ನೊಂದು ಆತನ ಕಾವ್ಯದೃಷ್ಟಿ, ಜೀವನದಲ್ಲಿಯೂ ಕಾವ್ಯದಲ್ಲಿಯೂ ಅವನು ಹೊಸಮಾರ್ಗವನ್ನು ತುಳಿದನು. ಅಲ್ಲಿ ಯಾರೊಡನೆಯೂ ಅವನು ಒಡಂಬಡಿಕೆಯನ್ನು ಮಾಡಿಕೊಳ್ಳಲಿಲ್ಲ.[೫೭] ಛಂದಸ್ಸು, ವ್ಯಾಕರಣ, ವಸ್ತು, ಪ್ರಕಾರ, ಶೈಲಿ –ಮುಂತಾಗಿ ಹಲವು ವಿನೂತನಗಳನ್ನು ಸಾಹಿತ್ಯದಲ್ಲಿ ತಂದ ಹರಿಹರ ಮಹಾಕವಿ ಗದ್ಯದ ಬಳಕೆಯಲ್ಲಿಯೂ ವಿನೂತನತೆಯನ್ನು ಮೆರೆದಿದ್ದಾನೆ. ಈ ಹಿನ್ನಲೆಯಲ್ಲಿ ಕೆಳಗಿನ ಮಾತುಗಳನ್ನು ಉಲ್ಲೇಖಿಸಬಹುದು.

ಕನ್ನಡ ಸಾಹಿತ್ಯದಲ್ಲಿ ಹರಿಹರನಿಗೆ ಮಹತ್ತ್ವದ ಸ್ಥಾನವಿದೆ. ಸಾಹಿತ್ಯದ ಹೆರವಿಗೊಂದು ಹೊಸ ತಿರುವು ಕೊಟ್ಟು ಕ್ರಾಂತಿಯ ಕಹಳೆಯನ್ನು ಮೊಳಗಿದ ವೈಶಿಷ್ಟ್ಯ ಅವನದು. ವೀರಶೈವ ಸಾಹಿತ್ಯಕ್ಕೆ ಆಚಾರ್ಯಪುರುಷ ಎಂಬ ಪ್ರಶಂಸೆ ಅವನಿಗೆ ಸಂದಿದೆ. ಅವನ ಶತಕಗಳು, ರಗಳೆಗಳು, ಭಾಷೆ, ವಸ್ತು, ಶೈಲಿ, ಛಂದಸ್ಸು ಇವುಗಳ ದೃಷ್ಠಿಯಿಂದ ಹೊಸ ದಾರಿ ಹಾಕಿಕೊಟ್ಟು ಮುಂದಿನ ಕವಿಗಳಿಗೆ ಮಾರ್ಗದರ್ಶಿಯಾಗಿವೆ.[೫೮] ಕಾವ್ಯದಲ್ಲಿ ಸರಳತೆ ಮತ್ತು ಸ್ವಾತಂತ್ರ್ಯ ಎಂಬ ಎರಡು ವಿಶೇಷ ಗುಣಗಳಿಗಾಗಿ ಹರಿಹರ ಕನ್ನಡದಲ್ಲಿ ವಿಶಿಷ್ಟ ಕವಿಯಾಗಿದ್ದಾನೆ.

ರಸಗಳು

ನೂತನ ಮತ್ತು ಪುರಾತನರ ರಗಳೆಗಳಲ್ಲಿ ಬರುವ ಆದಯ್ಯನ ರಗಳೆ, ಪ್ರಭುದೇವರ ರಗಳೆ, ಮಲುಹಣರ ರಗಳೆಗಳಲ್ಲಿ ಶೃಂಗಾರದ ಚಿತ್ರಗಳು ಸೊಗಸಾಗಿ ಬರುತ್ತವೆ. ಪ್ರಭುದೇವರ ರಗಳೆಯಲ್ಲಿ ಕವಿ ಶೃಂಗಾರದ ವರ್ಣನೆಯನ್ನು ಸೊಗಸಾಗಿ ತಂದಿದ್ದಾನೆ. ಈ ಸಂದರ್ಭದಲ್ಲಿ ಅಲ್ಲಮ ಮತ್ತು ಕಾಮಲತೆಯರ ವರ್ಣನೆಯನ್ನು ಮಾಡುವಾಗ ಆ ಎರಡೂ ಪಾತ್ರಗಳು ತಮ್ಮ ತನು, ಮನ, ಧನಗಳನ್ನು ಅರ್ಪಿಸಿಕೊಂಡ ಅಸಾಧಾರಣ ಚಿತ್ರಣವನ್ನು ಕವಿ ಹೀಗೆ ಕಟ್ಟಿಕೊಟ್ಟಿದ್ದಾನೆ.

ಆಲಿಂಗನದೊಳಿರ್ವರೊರ್ವರಾಗುತ್ತಮಿರೆ
ಸೋಲದ ಸೊಗಸು ಮನಮ ನೋಲಾಡಿಸುತ್ತಮಿರೆ
ಕಣ್ಗಳರೆಮುಗಿವುತಿರೆ ಕರ ತಳಂ ನಡುಗಂತಿರೆ
ನುಣ್ಗೊರಲ್ನಲಿವುತಿರೆ ನುಡಿ ಮರುಳ್ಗೊಳುತಮಿರೆ
ಕದಪು ಬೆಮರುತ್ತಮಿರೆ ಮೆಯ್ಯುಕ್ಕುತಂತಮರೆ
ತೊದಳೊತ್ತರಿಸುತಮಿರೆ ಸುಯ್ನೀಳ್ದು ಸೂಸುತಿರೆ [೫೯]

ಹೀಗೆ ಕವಿಯು ಆ ಕ್ಷಣದಲ್ಲಿ ಆ ಪಾತ್ರಗಳಲ್ಲಾಗುವ ಮನೋವ್ಯತ್ಯಾಸವನ್ನು ಭಾವತುಂಬಿ ವರ್ಣಿಸಿದ್ದಾನೆ. ಅಲ್ಲಿ ಲೌಕಿಕದ ಅಸಹ್ಯಗಳಿಗೆ ಅವಕಾಶವೇ ಇಲ್ಲ. ಈ ಮಾತಿನ ಹಿನ್ನಲೆಯಲ್ಲಿ ವಿದ್ವಾಂಸರ ಹೇಳಿಕೆಯನ್ನು ಗಮನಿಸಬಹುದು. ಶೃಂಗಾರ ರಸವನ್ನು ಕವಿ ಹರಿಹರ ದೇವನು ಗಿರಿಜಾಕಲ್ಯಾಣದಲ್ಲಿ ಧಾರಾಳವಾಗಿ ಬಳಸಿಕೊಂಡಿರುವನು. ಅಲ್ಲಿ ಅದರ ಉಪಯುಕ್ತತೆಗೆ ಅವನಿಗೆ ತಕ್ಕ ಸಂದರ್ಭವೂ ಒದಗಿ ಬಂದಿತು. ಆದರೆ ಶಿವಶರಣರ ಚರಿತ್ರೆಗಳಲ್ಲಿ ಶೃಂಗಾರ ರಸಕ್ಕೆ ಪೋಷಕವಾಗುವ ಸನ್ನಿವೇಶಗಳು ತೀರಾ ವಿರಳ. ತೀರ ವಿರಳವಾದರೂ ಅಂತಹ ಸನ್ನಿವೇಶಗಳು ಬಂದ ಕಡೆಯಲ್ಲಿ, ಹರಿಹರದೇವ ಶೃಂಗಾರ ರಸವನ್ನು ಬಳಸಿಕೊಳ್ಳದೆ ಬಿಟ್ಟಿರುವುದಿಲ್ಲ.[೬೦]

## ೨. ಚಾಮರಸನ ಷಟ್ಪದಿ ಶೈಲಿ :

ಷಟ್ಪದಿ, ಆಕರ್ಷಕ ಬಂಧ, ರೂಪಕ ಗುಣ, ಅನುಭಾವದ ಅನನ್ಯ ನಿರೂಪಣೆಗಳು ಯಾರನ್ನೂ ಮಂತ್ರಮುಗ್ಧರನ್ನಾಗಿ ಮಾಡುತ್ತವೆ. [೬೧] ಚಾಮರಸನ ಭಾಷಾ ಶೈಲಿ ಹಲವು ವಿಧದಲ್ಲಿ ಕುಮಾರವ್ಯಾಸನಿಗೆ ಹತ್ತಿರವಾದುದು. ಭಾಮಿನಿ ಷಟ್ಪದಿಯ ನಿರರ್ಗಳವಾದ ಬಳಸುವಿಕೆಯಲ್ಲಿಯೂ ರೂಪಕ ಸಂಪತ್ತಿನಲ್ಲಿಯೂ ಕುಮಾರವ್ಯಾಸನು ಚಾಮರಸನೂ ಒಂದೇ ಒಕ್ಕಲಿನವರು. ಅಷ್ಟಾದಶ ವರ್ಣನೆಗಳ ವಿಷಯದಲ್ಲಿ ಇಬ್ಬರೂ ಸಂಪ್ರದಾಯ ವಿಮುಖರು. ಸಂದರ್ಭವಶವಾಗಿ ಬಂದ ವರ್ಣನೆಯನ್ನು ಔಚಿತ್ಯವರಿತು ಮಾಡುತ್ತಾರೆ. ವರ್ಣನೆ ಬರಲೇಬೇಕೆಂದು ಸಂದರ್ಭವನ್ನು ಹಿಡಿದು ತರುವುದಿಲ್ಲ .

ಸಿಸುವ ನೋಡಿದ ಕಣ್ಗೆ ಮಾಯುವೆ
ಮುಸುಕುವುದು ಮನ ಮೆಚ್ಚುವುದು ಮೋ
ಹಿಸುವುದೀ ಪರಿ ಜನನಿಜನಕಾದ್ಯರುಗಳೆಲ್ಲರಿಗೆ
ವಸುಮತೀಪತಿ ಬಳಿಕಲತಿಸಂ
ತಸದೊಳಾತ್ಮಜೆಗಖಿಲವಿಭವದಿ
ಹೆಸರನಿಟ್ಟನು ಮಾಯೆಯೆಂಬ ನವೀನನಾಮವನು [೬೨]

ಚಾಮರಸನ ಶೈಲಿಯಲ್ಲಿ ಕಂಡುಬರುವ ಮುಖ್ಯ ಗುಣಗಳೆಂದರೆ ಸರಳತೆ ಮತ್ತು ಶ್ರಾವ್ಯತೆ. ಅಭಿವ್ಯಕ್ತಿಗೆ ಅನುಕೂಲವಾಗುವಂತಹ ಕಾವ್ಯಕ್ಕೆ ಶೋಭೆ ತರುವಂತಹ ರೂಪಕ ಮೊದಲಾದ ಅಲಂಕಾರಗಳನ್ನು ಚೆನ್ನಾಗಿ ಪ್ರಯೋಗ ಮಾಡಿದ್ದಾನೆ.

ಗಳಿಗೆ ಸಂಖ್ಯೆಗೆ ನುಡಿಯ ಕಲಿತನು
ಗಳಿಗೆ ಸಂಖ್ಯೆಗೆ ನಡೆಯ ಕಲಿತನು
ಗಳಿಗೆ ಸಂಖ್ಯೆಗೆ ಬಳೆದನವರ ಮನೋರಥದ ಕೂಡೆ
ಗಳಿಗೆ ಸಂಖ್ಯೆಗೆ ಬಾಲಲೀಲೆಯ
ನಳವಡಿಸಿಕೊಂಡಾಡುತಿಹ ಮ
ಕ್ಕಳಲಿ ಮೆಱೆವುತಲಿರ್ದನಲ್ಲಮ ತನ್ನ ಲೀಲೆಯಲಿ [೬೩]

ಕಂಗಳಲಿ ಮಾತುಗಳು ತಿಳಿವೊಡೆ
ಕಂಗಳಲಿ ಮಾಟಗಳು ಬಗೆವೊಡೆ
ಕಂಗಳಲಿ ಸಮ್ಮೋಹಗಳು ಕಂಗಳಲಿ ನೇಹಗಳು
ಕಂಗಳಲಿ ಸರ್ವಪ್ರಪಂಚುಗ
ಳಂಗನೆಯರಿಗೆ ಸಹಜವೆಂದೆನೆ
ಕಂಗಳಿಂದಾ ವಿಮಳೆ ಸೂಚಿಸಲಱಿದಳಾ ಮಾಯೆ [೬೪]

ಇಲ್ಲಿ ಯಮಕಾಲಂಕಾರವಿದೆ.

---

ಷಟ್ಪದಿಕಾರರಲ್ಲಿ ಕುಮಾರವ್ಯಾಸನನ್ನು ಬಿಟ್ಟರೆ ರೂಪಕ ನಿರ್ಮಾಣ ಕುಶಲತೆಯಲ್ಲಿ ಚಾಮರಸನೇ ಮೇಲುಗೈ. ದೇವ ದಾನವ ಮಾನವರುಗಳಡಾವನೆಯದನಮಾಡಿ ಕಟ್ಟುವ ಭಾವೆ , ತಮುವ ತರಣಿಯನೊಂದುಗೂಡುವವೆಂಬ ಭಾವ ಭ್ರಮಿತ ಬುದ್ಧಿಯಲಿ , ಭಾಸ್ಕರನ ಬಟ್ಟೆಗೆ ದೀವಿಗೆಯ ಹಂಗೇಕೆ, ದ್ಯುಮಣಿಯಲ್ಲಮ ಸಿಕ್ಕದಾದನು ತಮದಮಾಯೆಗೆ ಎಂಬಂತಹ ಕೆಲವು ಉದಾಹರಣೆಗಳು ಈ ಮಾತನ್ನು ಸ್ಪಷ್ಟಪಡಿಸುತ್ತವೆ. ಸಾದೃಶ್ಯಗಳ ಕಲ್ಪನೆ ಮತ್ತು ಉಪಮೆ ರೂಪಕಗಳಲ್ಲಿಯೂ ಚಾಮರಸನದು ಸಹಜ ಕುಶಲತೆಯೆಂಬುದನ್ನು ಮನಗಾಣಬಹುದು. ಇವನ ಭಾಮಿನೀ ಷಟ್ಪದಿಯು ಅತ್ಯಂತ ಗಮನಾರ್ಹವಾದುದು. ಚಾಮರಸನ ಪ್ರಭುಲಿಂಗಲೀಲೆಯ ಸ್ವರೂಪವು ಈ ವರ್ಣನೆಗೆ ಅನುಗುಣವಾಗಿಯೇ ಇದೆಯೆಂದು ಹೇಳಬಹುದು.

ಮೂರು ಮಾತ್ರೆಯ ಗಣದ ಮುಂದೆ ನಾಲ್ಕು ಮಾತ್ರೆಯ ಗಣವು ಬರುವ ಹಾಗೆ ಈ ಗಣಗಳು ಒಂದೆರಡು ನಾಲ್ಕೈದನೆಯ ಪಾದಗಳಲ್ಲಿ ಎರಡೆರಡೂ, ಮೂರು ಆರನೆಯ ಪಾದಗಳಲ್ಲಿ ಮೂರು ಮೂರು ಒಂದು ಗುರುವೂ ಇರುವುದು ಭಾಮಿನೀ ಷಟ್ಪದಿಯೆನಿಸುವುದು. ಪ್ರಭುಲಿಂಗಲೀಲೆಯ ಅನೇಕ ಪದ್ಯಗಳು ನಿರರ್ಗಳವಾಗಿ ಓದಿಸಿಕೊಂಡು ಹೋಗುತ್ತವೆ. ಈ ಕೃತಿಯ ಕೆಲವು ಕಡೆಗಳಲ್ಲಾದರೂ ಭಾಮಿನೀ ಷಟ್ಪದಿಯ ಶೈಲಿ ಬಹುಮಟ್ಟಿಗೆ ಕುಮಾರವ್ಯಾಸನ ಶೈಲಿಯನ್ನು ಹೋಲುತ್ತದೆ.

ಪ್ರಭುಲಿಂಗಲೀಲೆಯಲ್ಲಿ ಸಮಯೋಚಿತವಾದ ಉಪಮಾನ ದೃಷ್ಟಾಂತ ಮತ್ತು ರೂಪಕಗಳ ಮೂಲಕ ಕವಿ ಭಾವವ್ಯಂಜನ ಮಾಡಿಸಿದ್ದಾನೆ. ರೂಪಕಾಲಂಕಾರಕ್ಕೆ ಒಂದು ಉದಾಹರಣೆಯನ್ನು ನೋಡಬಹುದು.

ಲೇಪಿಸಿದಹಂಕಾರವೇ ಪಶು
ಯೂಪಕಂಭವೆ ಮನಸು ಪವನ
ಸ್ಥಾಪಿತವೆ ಬಂಧಿಸುವ ಪಾಶ ವಿವೇಕವೇ ಶಸ್ತ್ರ
ವ್ಯಾಪಿಸಿದ ಸುಜ್ಞಾನವಹ್ನಿ ಸ
ದಾ ಪುನೀತಮಯಾತ್ಮನಧ್ವರಿ
ಯಾ ಪರಿಯನಱುಹಿಸಿದನಾ ಪ್ರಭು ಪರಮಮುನಿಗಳಿಗೆ [೬೫]

## ಊ) ಹರಿಹರ ಮತ್ತು ಚಾಮರಸರ ಜೀವನ ದರ್ಶನ:

ಹರಿಹರನ ಶಿವಗಣ ಪ್ರಪಂಚವು ವೈವಿಧ್ಯಯುಕ್ತವಾಗಿರುವಂತೆ ಸ್ವಾರಸ್ಯಕರವೂ ಆಗಿದೆ. ಅಲ್ಲಿ ಪಚ್ಚ ಪಸಿಯ ಒಕ್ಕಲುಮಕ್ಕಳಿದ್ದಾರೆ. ಕೂಸುಗಳು ನಡುಹರೆಯದವರು , ಮುದುಕರು, ಗಂಡಸರು, ಹೆಣ್ಣುಮಕ್ಕಳು, ಸಂಸಾರಿಗಳು, ವಿರಕ್ತರು, ಮುಕ್ತರು ಇವರೆಲ್ಲರಿಗೆ ಸ್ಥಾನವಿದೆ. ಕವಿಗಳಂತೆ ಕೂಲಿ ಮಾಡುವವರೂ ಇದ್ದಾರೆ. ಕವಿಗಳು ಮಾತ್ಸರ್ಯದ ಸ್ವಭಾವ ತೋರಿದ್ದಾರೆ. ಕೂಲಿ ಮಾಡುತ್ತಿರುವ ವ್ಯಕ್ತಿಯ ಕಾಯಕದ ಪಾವಿತ್ರ್ಯ ಕಾಯ್ದುಕೊಳ್ಳುವಲ್ಲಿ ನಿಷ್ಠೆ ತೋರಿಸುವ ಚಿತ್ರಣ ಬರುತ್ತದೆ. ಹರಿಹರನ ಶಿವಗಣ ಪ್ರಪಂಚದ ವಿಭಿನ್ನ ವ್ಯಕ್ತಿಗಳ, ಸ್ವಭಾವದ, ಸ್ಥಾನಮಾನದ, ವೃತ್ತಿಗಳ ನಿರೂಪಣೆಯಲ್ಲಿ ಅವರಿವರೆನ್ನದೆ ಎಲ್ಲರಿಗೂ ಸ್ಥಾನವಿದೆ. ಮನ್ನಣೆಯಿದೆ. ಅನೇಕ ವೈವಿಧ್ಯಗಳಿಂದ ಕೂಡಿದ ಭಿನ್ನ ಭಿನ್ನ ವ್ಯಕ್ತಿಗಳ ಸ್ವಾರಸ್ಯಕರವಾದ ಮೆರವಣಿಗೆಯು ಹರಿಹರನ

ರಗಳೆಗಳಲ್ಲಿ ರೂಪುಗೊಂಡಿದೆ. ಇವರನ್ನೆಲ್ಲ ಬಂಧಿಸುವ ಏಕಸೂತ್ರವೆಂದರೆ, ಅವರೆಲ್ಲರೂ ಭಕ್ತರು, ನಿಷ್ಠಾವಂತರು, ಪರಮಾತ್ಮನಲ್ಲಿ ಅಚಲ ನಿಷ್ಠೆಯುಳ್ಳವರು. ಸಮರ್ಪಣಭಾವವುಳ್ಳವರು, ದೈವೀಕೃಪೆ ಪಡೆಯುವಲ್ಲಿ ಎಂಥ ಸಾಹಸಕ್ಕೂ ಕಷ್ಟ ಸಹಿಷ್ಣುತೆಗೂ ತ್ಯಾಗಕ್ಕೂ ಹಿಂಜರಿಯದವರು. ಕೊನೆಗೆ ದೈವೀಕೃಪೆಗೆ ಪಾತ್ರರಾಗುವರು.

ಹರಿಹರನ ಈ ಪ್ರಪಂಚದ ಕೆಲವೊಂದು ವ್ಯಕ್ತಿಗಳನ್ನಾರಿಸಿಕೊಂಡು ಅವರ ಜೀವನ, ಹರಿಹರನು ಅವರ ಜೀವನದ ಮೂಲಕವಾಗಿ ಬಿಂಬಿಸುವ ದರ್ಶನವನ್ನು ನಾವು ಅರಿತುಕೊಳ್ಳಬಹುದು. ಭಕ್ತರ ಕಥೆಯನ್ನು ಚಿತ್ರಿಸುವಾಗ ಹರಿಹರ ಆ ಭಕ್ತರೊಡನೆ ತಾದಾತ್ಮ್ಯ ಹೊಂದುತ್ತಾನೆ. ಭಕ್ತಿಯ ಭಾವೋನ್ಮಾದದಲ್ಲಿ ತಾನು ಬೇರೆ, ಭಕ್ತ ಬೇರೆ ಎಂಬ ಭಾವನೆಯೆ ಉಳಿಯುವುದಿಲ್ಲ ಅವನಲ್ಲಿ. ಆ ಭಕ್ತರೊಡನೆ ತಾನೂ ಹಾಡುತ್ತಾನೆ, ಕುಣಿಯುತ್ತಾನೆ. ಶಿವನೊಡನೆ ಬೆರೆತು ಶಿವ ಸುಖದಲ್ಲಿ ಓಲಾಡುತ್ತಾನೆ.[೬೬]

ಹರಿಹರ ಕವಿಯು ಕಾವ್ಯ ರಚನೆ ಮಾಡಿದ ಉದ್ದೇಶ ಭಕ್ತಿಯ ಮಹತ್ವವನ್ನು ಮತ್ತು ಶಿವನ ಮಹಿಮೆಯನ್ನು ಪ್ರದರ್ಶಿಸುವುದಕ್ಕಾಗಿ ಹಾಗೆಯೇ ಭಕ್ತನ ವ್ಯಕ್ತಿತ್ವವನ್ನು ಉಜ್ವಲವಾಗಿ ಮೆರೆಯಿಸುವ ಉದ್ದೇಶವು ಕವಿಗೆ ಇದ್ದಂತಿದೆ. ಅವನು ಸೃಷ್ಟಿಸಿದ ಪ್ರತಿಯೊಂದು ಸನ್ನಿವೇಶಗಳ ಹಿಂದೆಯೂ ಅಂತಹದ್ದೊಂದು ಮಹತ್ವದ ಉದ್ದೇಶವನ್ನು ಇಟ್ಟುಕೊಂಡಂತೆ ಕಾಣುತ್ತದೆ. ಪ್ರಸ್ತುತ ಹರಿಹರನ 'ಪ್ರಭುದೇವರ ರಗಳೆ'ಯಲ್ಲಿಯೂ ಚಾಮರಸನ 'ಪ್ರಭುಲಿಂಗಲೀಲೆ'ಯಲ್ಲಿಯೂ ಆ ಭಕ್ತರ ವ್ಯಕ್ತಿತ್ವವನ್ನು ಸಮರ್ಪಕವಾಗಿ ಕಟ್ಟಿಕೊಟ್ಟಿರುವ ಉದಾಹರಣೆಯನ್ನು ಕಾಣಬಹುದು.

ಹರಿಹರ ಸೃಷ್ಟಿಸುವ ಪಾತ್ರಗಳ ಜೀವನ ಎಂದರೆ ಜೈನ ಕೃತಿಗಳಲ್ಲಿ ಬರುವಂತೆ ಕೇವಲ ಯೋಗ ಜೀವಿಗಳು ಮಾತ್ರವಲ್ಲ. ಅವು ಯೋಗ ಮತ್ತು ಭೋಗ ಸಮನ್ವಯ ಜೀವಿಗಳು. ಈ ಮನೋದೃಷ್ಟಿ ಹಿನ್ನಲೆಯಲ್ಲಿಯೇ ಪಾತ್ರಗಳು ಸೃಷ್ಟಿಯಾಗಿವೆ. ಹರಿಹರನ ರಗಳೆಗಳಲ್ಲಿ ಬರುವ ಹಲವಾರು ಶರಣರು ಭೋಗ ಜೀವಿಗಳು ಹೌದು; ಯೋಗ ಜೀವಿಗಳು ಕೂಡ. ಪ್ರಭುದೇವರ ರಗಳೆಯನ್ನು ತೆಗೆದುಕೊಂಡರೂ ಈ ಅಂಶವನ್ನು ಕಾಣಬಹುದು. ಅಲ್ಲಮ ಒಬ್ಬ ಮಹಾಯೋಗಿ ಆದರೆ ಆತ ಭೋಗದ ಬದುಕನ್ನು ನಿರಾಕರಿಸಿದವನಲ್ಲ. ಆತ ಯೌವ್ವನಕ್ಕೆ ಬರುತ್ತಿದ್ದಂತೆಯೆ ಕಾಮಲತೆಯೆಂಬ ಸುಂದರ ಕನ್ಯೆಯನ್ನು ಮೋಹಿಸುತ್ತಾನೆ. ಅವಳೊಡನೆ ಕೆಲಕಾಲ ಭೋಗದ ಬದುಕನ್ನು ಕಳೆದಿರಬೇಕು. ಆ ಬದುಕು ಪೂರ್ತಿಯಾದ ನಂತರವೇ ಅವನಿಗೆ ಗೊಹೇಶ್ವರನ ದರ್ಶನವಾಗುತ್ತದೆ. ಕೈಲಾಸದ ಗಣ ಪದವಿಯನ್ನು ಮತ್ತೆ ಪಡೆಯುತ್ತಾನೆ. ಆ ಮೂಲಕ ಕವಿಯ ಮನೋಭಾವ ಮತ್ತು ಜೀವನ ದರ್ಶನವನ್ನು ತಿಳಿಯಬಹುದು.

ಕನ್ನಡದ ಮಹಾಕವಿಗಳಲ್ಲಿ ಒಬ್ಬನಾದ ಹಂಪೆಯ ಹರಿಹರದೇವ ಪ್ರಾಚೀನ ಕನ್ನಡ ಕಾವ್ಯ ಪ್ರಪಂಚದಲ್ಲಿ ನವೀನ ಮಾರ್ಗ ಸ್ಥಾಪಕನೆಂಬುದು ತಿಳಿದ ವಿಷಯವಾಗಿದೆ. ಶೈವಭಕ್ತಿ ಮಾರಣವಲಯಗಳಾದ ಕನ್ನಡ ಕವಿಗಣಕ್ಕೆ ಆಚಾರ್ಯ ಪುರುಷನಾದ. ಈತನ ವ್ಯಕ್ತಿತ್ವವು ಪ್ರಭಾವ ಶಾಲಿಯಾದುದು. ಗಿರಿಜಾ ಕಲ್ಯಾಣ, ಅಷ್ಟಕ, ಶತಕಗಳು, ನೂರಾರು ರಗಳೆಗಳನ್ನು ರಚಿಸಿದ ಈತನು ಕನ್ನಡಕ್ಕೆ ವಿಪುಲವಾದ, ಅರ್ಥವತ್ತಾದ, ಸ್ವಾರಸ್ಯಕರವಾದ ಕಾಣಿಕೆಯನ್ನು ಸಲ್ಲಿಸಿದ್ದಾನೆ. ಹಿರಿಯ ಕವಿಯೂ, ಭಕ್ತನೂ, ಕ್ರಾಂತಿಪುರುಷನೂ ಆದ ಈತನು ವಿಜಯನಗರ ಸಾಮ್ರಾಜ್ಯದ

ತೇಜಸ್ಸಿನ ಪೂರ್ವ ಸೂಚನೆಯಂತೆ ಹಂಪೆಯನ್ನು ತನ್ನ ಕಾರ್ಯರಂಗವನ್ನಾಗಿ ಮಾಡಿಕೊಂಡಿದ್ದ. ಅಲ್ಲಮಪ್ರಭುವಿನ ವ್ಯಕ್ತಿತ್ವದಲ್ಲಿ ಶಿವನ ಸ್ವರೂಪವೂ ಬೆರೆತುಕೊಂಡು ಬಲ್ಲವರಿಗೆ, ಭಾವಕರಿಗೆ, ಭಕ್ತಿಯನ್ನುಳ್ಳವರಿಗೆ, ಸಾಧಕರಿಗೆ ಹೊಸ ದರ್ಶನವನ್ನು ನೀಡುತ್ತದೆ. ಒಟ್ಟಂದದಲ್ಲಿ ಸಲ್ಲಲಿತ ಸಂಗತಿಯ ಪದದೊಳಗೆ ಅಲ್ಲಮ ಮಹಿಮೆ ಪ್ರಕಟಗೊಂಡು ಪ್ರಭುಲಿಂಗಲೀಲೆ ಗಾಢವಾದ ಪ್ರಭಾವವನ್ನು ಬೀರುತ್ತದೆ [೬೬] ಎನ್ನುವುದು ಕಾವ್ಯದ ಅನುಸಂಧಾನದಿಂದ ಗೋಚರವಾಗುತ್ತದೆ.

ಹರಿಹರನು ಇಟ್ಟುಕೊಂಡ ಕಾವ್ಯದೃಷ್ಟಿಯಿಂದ ಒದಗಿದ ಇನ್ನೊಂದು ಸಿದ್ಧಿ ಅವನ ಕೃತಿಗಳಲ್ಲಿ ಅನುಸ್ಯೂತವಾಗಿ ಕಂಡುಬರುವ ಭಕ್ತಿರಸದ ಹರಿವು. ಧರ್ಮದ ನಿರೂಪಣೆ ಅಧಿಕವಾದರೆ ಕಾವ್ಯ ಹೋಗಿ ಪುರಾಣವಾಗುವ ಸಂಭವ ಹೆಚ್ಚು; ವರ್ಣನೆಯ ಚಾಪಲ್ಯ ಹೆಚ್ಚಾದರೆ ಅನೌಚಿತ್ಯ ಅಸಹಜತೆಗಳ ದೋಷ ಅಧಿಕವಾಗುವ ಭೀತಿ. ಈ ಎರಡನ್ನೂ ಹಾಳತವಾಗಿ ಇಟ್ಟುಕೊಂಡು ತನ್ನ ಆದರ್ಶವಾದ ಭಕ್ತಿಯನ್ನು ಉಜ್ವಲವಾಗಿ ಆತ ನಿರೂಪಿಸಿದ್ದಾನೆ. ಡಿ.ಎಲ್. ನರಸಿಂಹಚಾರ್ ಅವರು ಈ ಸಿದ್ಧಿಯನ್ನು ಹೀಗೆ ಪ್ರಶಂಸಿದ್ದಾರೆ.[೬೮]

ವಿರಕ್ತ ಕವಿಯಾಗಿ, ಜನತೆಯ ಕವಿಯಾಗಿ ನಿಸ್ಪೃಹನಾಗಿ, ನುತಿಸೆನುಳಿದ ಸುರರಂ ನರರಂ ಎಂಬ ಪ್ರತಿಜ್ಞೆಯೊಂದಿಗೆ ಶಿವನಂ ಶಿವೈಕ್ಯರಂ ನುತಿಸಿದ ರಗಳೆಗಳನ್ನು ರಚಿಸಿದ ಹರಿಹರನ ಪ್ರಭಾವವು ಇನ್ನೊಂದು. ಹಲವು ಬಗೆಯಲ್ಲಿ ಕ್ರಾಂತಿಕಾರನಾದ ಈ ಕವಿಯು ಅಂದು ಲೋಕ ಶಿಕ್ಷಣದ ಕಾರ್ಯವನ್ನು ಕೈಕೊಂಡನೆಂದು ತಿಳಿಯಬಹುದು. ಹಂಪೆಯ ವಿದ್ಯಾಪೀಠದಲ್ಲಿ ವಿದ್ಯಾಭೋಧೆ, ರಗಳೆಗಳ ರಚನೆ ಮಾಡಿದ್ದಾನೆ. ಈತ ಹಂಪೆಯ ವಿರೂಪಾಕ್ಷನ ನಿಸ್ಸೀಮ ಭಕ್ತನಾಗಿದ್ದ. ಕಾವ್ಯದೃಷ್ಟಿ, ವಸ್ತು, ಭಾಷೆ, ರೂಪ ಇವುಗಳಲ್ಲಿ ನವೀನತೆಯನ್ನು ತೋರಿಸಿದ್ದಾನೆ. ಮಾನವನ ಭಾವನೆಗಳ ಮಹೋನ್ನತೀಕರನದತ್ತ ದೃಷ್ಟಿಯನ್ನು ಹರಿಯಿಸುವ ಜೀವನ ದರ್ಶನವನ್ನು ನಾವು ಹರಿಹರನ ಕಾವ್ಯಕೃತಿಗಳಲ್ಲಿ ಮುಖ್ಯವಾಗಿ ರಗಳೆಗಳಲ್ಲಿ ಕಾಣುತ್ತೇವೆ. ಈ ದೃಷ್ಟಿಯಲ್ಲಿ ಹರಿಹರನ ಪ್ರಭುದೇವರ ರಗಳೆ ಮತ್ತು ಚಾಮರಸನ ಪ್ರಭುಲಿಂಗ ಲೀಲೆಯನ್ನು ತೌಲನಿಕವಾಗಿ ವಿವರಿಸಲಾಗಿದೆ. ಈ ರೀತಿಯ ಅಧ್ಯಯನದಿಂದ ಈ ಕೃತಿಗಳಲ್ಲಿರುವ ಶೈಲಿ ಭಾಷೆಯ ಪರಿಚಯುವಾಗುತ್ತದೆ. ಕವಿಯ ಮನೋಧರ್ಮವನ್ನು ತಿಳಿದುಕೊಳ್ಳಲು ಈ ಪದ್ಯವನ್ನು ಗಮನಿಸಬಹುದು.

> ಮನುಜರ ಮೇಲೆ ಸಾವವರ ಮೇಲೆ ಕನಿಷ್ಟರ ಮೇಲೆಯಕ್ಕಟಾ
> ತನತನಗಿಂದ್ರ ಚಂದ್ರ ರವಿಕರ್ಣದಧೀಚಿ ಬಲೀಂದ್ರನೆಂದು ಮೇಣ್
> ಅನವರತಂ ಪೊಗಳ್ದುಕೆಡಬೇಡೆಲೆ ಮಾನವ ನೀನಹರ್ನಿಶಂ
> ನೆನೆ ಪೊಗಳರ್ಚಿಸೆಮ್ಮ ಕಡು ಸೊಂಪಿನ ಪೆಂಪಿನ ಹಂಪೆಯಾಳ್ದನಂ [೬೯]

ಹೀಗೆ ಹರಿಹರನು ತನ್ನ ಕೃತಿಯಲ್ಲಿ ಹೆಚ್ಚು ಸಮರ್ಥವಾಗಿ ಹಾಗೂ ಅರ್ಥಪೂರ್ಣವಾಗಿ ಕಾವ್ಯದ ಉದ್ದೇಶವನ್ನು ಸಾರಿದ್ದಾನೆ. ಮಹಾಜ್ಞಾನಿ ಅಲ್ಲಮಪ್ರಭು ಯಾವ ಮತಕಟ್ಟಳೆಗಳಿಗೂ ನಿಲುಕದ ದಿವ್ಯ ವ್ಯಕ್ತಿ. ವೀರಶೈವ ಪಂಥದ ಪ್ರಸಾರಕ್ಕಾಗಿ, ಅದರ ಸಿದ್ಧಾಂತಗಳ ಆಚರಣೆಗಾಗಿ ಅವಿರತವಾಗಿ ಶ್ರಮಿಸಿದ ಬಸವ, ಚೆನ್ನಬಸವ, ಸಿದ್ಧರಾಮ ಮೊದಲಾದ ಶರಣರಂತಲ್ಲದೆ, ಅವರೆಲ್ಲರನ್ನು ಮೀರಿನಿಂದು ಬರಿಯ ಅಖಂಡ ಸತ್ಯವೊಂದನ್ನ ಸಾರಿದ ಮಾಹಾ ವ್ಯಕ್ತಿ ಅಲ್ಲಮ.

---

ಅವನಿಗೆ ವೀರಶೈವ ಮತದ ಅಭಿಮಾನಿಗಳಿಂದ ಆಚಾರ್ಯ ಪಟ್ಟ ದೊರೆತಿದ್ದರೂ ಅವರುಗಳು ತೋರುವ ಬರಿಯ ಅಭಿಮಾನವನ್ನು ಅವನು ಖಂಡಿಸಿ, ಪರಮ ಜ್ಞಾನವೊಂದನ್ನು ಮಾತ್ರ ಎತ್ತಿಹಿಡಿದ. ಬರಿಯ ಆಚರಣೆಗಿಂತ ತನ್ನೊಳಗಿನ ಅರಿವು ಮುಖ್ಯವೆಂದು ಸಾರಿದ. ಅಲ್ಲಮನು ಸಾಧಕನ ಜೀವನವನ್ನು ದಾಟನಿಂತ ಸಿದ್ಧನಾಗಿದ್ದ. ಅವನ ಜೀವನದ ಬಹು ಭಾಗವೆಲ್ಲ ಅಂದರೆ, ಸಾಧಕ ಜೀವನವೆಲ್ಲ ಅಜ್ಞಾತವಾಗಿಯೇ ಕಳೆದುಹೋಯಿತು. ಪ್ರಚಾರ, ಅಬ್ಬರಗಳಿಲ್ಲದೆ, ಸರಿದು ಹೋಯಿತು. ಮಾಯೆಯನ್ನು ಕಳಸಿ, ತನ್ನ ಜೀವನದ ಇನ್ನು ಲೌಕಿಕ ಸಂಗತಿಗಳಿಗೆ ಅಂಟದೆ ಇರಬಹುದೆಂದು, ಅದರಲ್ಲಿ ತೇಲಬಹುದೆಂದು ಅನಿಸಿದಾಗಲೆ ಅವನು ಅಜ್ಞಾತವಾಸದಿಂದ ಹೊರಬಂದ. ಜೀವನದಲ್ಲಿ ನಿಚ್ಚನಿಚ್ಚಕ್ಕ ಸುಳಿವ ಸಂಶಯಗಳು ಅವನಿಗೆ ದೂರವಾದುವುದು.

ಮಾಯೆ ಎನ್ನುವುದು ಹೊರಗಿನಿಂದ ಬಂದು ಆವರಿಸುವ ವಸ್ತುವಲ್ಲ. ಹೊನ್ನು, ಹೆಣ್ಣು, ಮಣ್ಣು ಈ ಮೂರು ಮಾಯೆಯಲ್ಲ. ಮನದ ಮುಂದಣ ಆಶೆಯೇ ಮಾಯೆ ಎಂದು ಲೌಕಿಕ ಜ್ಞಾನವನ್ನು ಬಯಲಿಗೆಳೆದುತೋರಿಸಿದೆ.

ತನ್ನ ತಾಗಱುದಡೆ ನುಡಿಯೆಲ್ಲ ತತ್ವ ನೋಡಾ
ತನ್ನ ತಾಮಱೆದಡೆ ನುಡಿಯಲ್ಲ ಮಾಯೆನೋಡಾ

ಎಂದು ಹೇಳಿ ಇಂಥ ಅಲೌಕಿಕ ವ್ಯಕ್ತಿಯೊಬ್ಬ, ವೀರಶೈವ ಸಾಂಸ್ಕೃತಿಯ ಕೇಂದ್ರವಾದ ಕಲ್ಯಾಣದತ್ತ ಧಾವಿಸಿ ಬರುತ್ತಿದ್ದಾನೆಂಬ ಸುದ್ಧಿ ಕೇಳಿಯೇ ಬಸವಣ್ಣ, ಚನ್ನಬಸವಣ್ಣ, ಸಿದ್ಧರಾಮ ಮೊದಲಾದ ಶರನರಲ್ಲಿ ಅಪೂರ್ವ ಪುಳಕವಾಯಿತು. ತಮ್ಮ ತಮ್ಮ ಹಾದಿಯಲ್ಲಿ ತಾವು ಶ್ರೇಷ್ಠರೆಂಬ ಅಹಮಿಕೆ ಅವರಲ್ಲಿದ್ದ ಕಾರಣ ಅದನ್ನು ಕನ್ನಡಿ ಹಿಡಿದು ತೋರಿಸಲು ಅಲ್ಲಮನು ಬರಬೇಕಾಯಿತು. ಇವರೆಲ್ಲರೂ ಕೈಕೊಂಡ ಕಾಯಕಕ್ಕೆ ಮೀರಿದ ವಸ್ತು ಗುಹೇಶ್ವರನೆಂಬುದನ್ನು ಅವರಿಗೆ ತೊರಿಸಿಕೊಡಬೇಕಾಯಿತು.

ಬಸವಣ್ಣನು ಎಲ್ಲ ಶಿವಶರಣರನ್ನು ಒಂದುಗೂಡಿಸಿ ತತ್ವಜಿಜ್ಞಾಸೆ ನಡೆಸುವ ಸಲುವಾಗಿ ಅನುಭವ ಮಂಟಪವನ್ನು ಸ್ಥಾಪಿಸಿದ. ಅದು ಪರಸ್ಪರ ಅಭಿಪ್ರಾಯ, ವಿಚಾರಗಳ ಮಂಡನೆ ಮಾಡುವ ಕೇಂದ್ರವಾಗಿತ್ತು. ಅಲ್ಲಿ ಉಂಟಾಗುತ್ತಿದ್ದ ವಿವಿಧ ಅಭಿಪ್ರಾಯಗಳನ್ನು ಕ್ರೂಢೀಕರಿಸಿ ಒಂದು ತತ್ವವನ್ನಾಗಿ ಸಾರಲು ಅಲ್ಲಮನಂತಹ ಮಹಾಜ್ಞಾನಿ ಶೂನ್ಯ ಸಿಂಹಾಸನದ ಅಧ್ಯಕ್ಷ ಪೀಠವನ್ನು ಅಲಂಕರಿಸಬೇಕಾಯಿತು.

ಹಲವು ಭೇದಗಳ ನಡುವೆ ಅಲ್ಲಮನ ವಾಣಿ ದೈವವಾಣಿಯಾಗಿ ಮೊಳಗುತ್ತಿತ್ತು. ಅಲ್ಲಮನ ಲೌಕಿಕವಾದ ಶಿವಾಚಾರವೇ ಸರ್ವಸ್ವವಾಗಿದ್ದ ಶರಣರಿಗೆ ಅಲ್ಲಮನ ಅಲೌಕಿಕವಾದ ದಿವ್ಯ ವಿಚಾರಗಳು ಅರಿವಿಗೆ ಬಾರದೆ ಅವನನ್ನು ಮತಬಾಹಿರನೆಂದು ತಿಳಿಯುವ ಮನಸ್ಸಾಗಿದ್ದರೆ ಆಶ್ಚರ್ಯವಿಲ್ಲ. ಆದರೆ ಬಸವ ಚೆನ್ನಬಸವಣ್ಣನಂತಹ ಪ್ರಾಮಾಣಿಕರಾದ ಅನುಭಾವಿಗಳಿಗೆ ಅಲ್ಲಮನು ಸಹಜವಾಗಿ ಶಿವನ ಅವತಾರವಾಗಿದ್ದ. ಅದರಿಂದಾಗಿ ಅಲ್ಲಮನ ಜ್ಞಾನದ ಕಿಡಿಗಳು ಹಾರಿ ವೀರಶೈವ ಪಂಥದ ಗಗನದಲ್ಲಿ ತಾರೆಗಳಾಗಿ ಬೆಳಗಿದವು.

## ಅಡಿಟಿಪ್ಪಣಿಗಳು :

೦೧. ಷಟ್ಪದಿ ಸಾಹಿತ್ಯ : ಕೆ. ಮರುಳಸಿದ್ದಪ್ಪ : ಪು.ಸಂ. ೧೦೫
೦೨. ಚಾಮರಸನ ಪ್ರಭುಲಿಂಗಲೀಲೆ : ಎಸ್. ವಿದ್ಯಾಶಂಕರ : ಪು.ಸಂ. ೩೩
೦೩. ಅದೇ : ಪು.ಸಂ. ೩೩
೦೪. ಅದೇ : ಪು.ಸಂ. ೨
೦೫. ನೂತನ ಪುರಾತನರ ರಗಳೆಗಳು : ಎಂ.ಎಸ್. ಸುಂಕಾಪುರ : ಪು.ಸಂ. ೧೭
೦೬. ಅದೇ : ಪು.ಸಂ. ೧೯
೦೭. ಅದೇ : ಪು.ಸಂ. ೯
೦೮. ಅದೇ : ಪು.ಸಂ. ೧೦
೦೯. ಅದೇ : ಪು.ಸಂ. ೧೨
೧೦. ಅದೇ : ಪು.ಸಂ. ೧೨
೧೧. ಅದೇ, : ಪು.ಸಂ. ೧೩
೧೨. ಅದೇ : ಪು.ಸಂ. ೧೪
೧೩. ಚಾಮರಸನ ಪ್ರಭುಲಿಂಗಲೀಲೆ : ಎಸ್. ವಿದ್ಯಾಶಂಕರ : ಪು.ಸಂ. ೧೧೧
೧೪. ಅಲ್ಲಮನ ವಚನ ಚಂದ್ರಿಕೆ : ಎಲ್. ಬಸವರಾಜು : ಪು.ಸಂ. ೩೬, ೩೭
೧೫. ನೂತನ ಪುರಾತನರ ರಗಳೆಗಳು : ಎಂ.ಎಸ್. ಸುಂಕಾಪುರ : ಪು.ಸಂ. ೫
೧೬. ಅದೇ : ಪು.ಸಂ. ೫
೧೭. ಚಾಮರಸನ ಪ್ರಭುಲಿಂಗಲೀಲೆ : ಎಸ್. ವಿದ್ಯಾಶಂಕರ : ಪು.ಸಂ. ೬೬
೧೮. ಅದೇ : ಪು.ಸಂ. ೬೬
೧೯. ನೂತನ ಪುರಾತನರ ರಗಳೆಗಳು : ಎಂ.ಎಸ್. ಸುಂಕಾಪುರ : ಪು.ಸಂ. ೧೨
೨೦. ಅದೇ : ಪು.ಸಂ. ೧೬
೨೧. ಅದೇ : ಪು.ಸಂ. ೧೨
೨೨. ಚಾಮರಸನ ಪ್ರಭುಲಿಂಗಲೀಲೆ : ಎಸ್. ವಿದ್ಯಾಶಂಕರ : ಪು.ಸಂ. ೨೬೭
೨೩. ಪ್ರಭುಲಿಂಗಲೀಲೆ ಸಂಗ್ರಹ : ಎಂ.ಆರ್. ಶ್ರೀನಿವಾಸಮೂರ್ತಿ : ಪು.ಸಂ. ೩೩
೨೪. ನೂತನ ಪುರಾತನರ ರಗಳೆಗಳು : ಎಂ.ಎಸ್. ಸುಂಕಾಪುರ : ಪು.ಸಂ. ೧೭
೨೫. ಚಾಮರಸನ ಪ್ರಭುಲಿಂಗಲೀಲೆ : ಎಸ್. ವಿದ್ಯಾಶಂಕರ : ಪು.ಸಂ. ೨೦
೨೬. ಅದೇ : ಪು.ಸಂ. ೧೭೫
೨೭. ಅದೇ : ಪು.ಸಂ. ೧೭೬
೨೮. ಅದೇ, : ಪು.ಸಂ. ೧೭೬
೨೯. ಅದೇ : ಪು.ಸಂ. ೧೭೮
೩೦. ಅದೇ : ಪು.ಸಂ. ೧೭೯
೩೧. ಅದೇ : ಪು.ಸಂ. ೧೭೧
೩೨. ಅದೇ : ಪು.ಸಂ. ೧೮೨

೩೩. ಅದೇ : ಪು.ಸಂ. ೧೮೨
೩೪. ಅದೇ : ಪು.ಸಂ. ೧೮೩
೩೫. ಅದೇ : ಪು.ಸಂ. ೧೯೨
೩೬. ಅದೇ : ಪು.ಸಂ. ೧೯೬
೩೭. ನೂತನ ಪುರಾತನರ ರಗಳೆಗಳು : ಎಂ.ಎಸ್. ಸುಂಕಾಪುರ : ಪು.ಸಂ. ೧೭
೩೮. ಚಾಮರಸನ ಪ್ರಭುಲಿಂಗಲೀಲೆ : ಎಸ್. ವಿದ್ಯಾಶಂಕರ : ಪು.ಸಂ. ೭೩
೩೯. ಅದೇ : ಪು.ಸಂ. ೧೬೧
೪೦. ಅದೇ : ಪು.ಸಂ. ೧೭೮
೪೧. ಅದೇ : ಪು.ಸಂ. ೨೧೫
೪೨. ಪ್ರಭುಲಿಂಗಲೀಲೆ ಸಂಗ್ರಹ : (ಸಂ) ಎಂ.ಆರ್. ಶ್ರೀನಿವಾಸಮೂರ್ತಿ : ಪು.ಸಂ. ೪೮
೪೩. ಚಾಮರಸನ ಪ್ರಭುಲಿಂಗಲೀಲೆ : ಎಸ್. ವಿದ್ಯಾಶಂಕರ : ಪು.ಸಂ. ೯೮
೪೪. ಅದೇ : ಪು.ಸಂ. ೯೮
೪೫. ಅದೇ : ಪು.ಸಂ. ೪೧
೪೬. ಅದೇ : ಪು.ಸಂ. ೪೪
೪೭. ಅದೇ, : ಪು.ಸಂ. ೬೬
೪೮. ಅದೇ : ಪು.ಸಂ. ೧೦೯
೪೯. ಅದೇ : ಪು.ಸಂ. ೧೭೦
೫೦. ಅದೇ : ಪು.ಸಂ. ೨೨೦
೫೧. ಕನ್ನಡ ಸಾಹಿತ್ಯ ಚರಿತ್ರೆ : (ಸಂ) ಹಾ.ಮಾ. ನಾಯಕ :
(ಕನ್ನಡ ಅಧ್ಯಯನ ಸಂಸ್ಥೆ) ಪು.ಸಂ. ೧೩೬೧
೫೨. ನೂತನ ಪುರಾತನರ ರಗಳೆಗಳು : ಎಂ.ಎಸ್. ಸುಂಕಾಪುರ : ಪು.ಸಂ. ೧೦
೫೩. ಕನ್ನಡ ಸಾಹಿತ್ಯ ಚರಿತ್ರೆ : (ಸಂ) ಹಾ.ಮಾ. ನಾಯಕ :
(ಕನ್ನಡ ಅಧ್ಯಯನ ಸಂಸ್ಥೆ) ಪು.ಸಂ. ೧೩೩೭
೫೪. ಶೈಲಿ (೧,೨,೩) : ಎಸ್.ವಿ. ರಂಗಣ್ಣ : ಪು.ಸಂ. ೨೨೯
೫೫. ಹರಿಹರನ ಕೃತಿಗಳು : ಹಿರೇಮಲ್ಲೂರ ಈಶ್ವರನ್ : ಪು.ಸಂ. ೪೮೧–೮೩
೫೬. ನೂತನ ಪುರಾತನರ ರಗಳೆಗಳು : ಎಂ.ಎಸ್. ಸುಂಕಾಪುರ : ಪು.ಸಂ. ೨೦
೫೭. ಹರಿಹರನ ಕೃತಿಗಳು : ಹಿರೇಮಲ್ಲೂರ ಈಶ್ವರನ್ : ಪು.ಸಂ. ೪೮೧–೮೩
೫೮. ಕನ್ನಡ ಸಾಹಿತ್ಯ ಚರಿತ್ರೆ : (ಸಂ) ಹಾ.ಮಾ. ನಾಯಕ :
(ಕನ್ನಡ ಅಧ್ಯಯನ ಸಂಸ್ಥೆ) ಪು.ಸಂ. ೧೩೭
೫೯. ನೂತನ ಪುರಾತನರ ರಗಳೆಗಳು : ಎಂ.ಎಸ್. ಸುಂಕಾಪುರ : ಪು.ಸಂ. ೮
೬೦. ಹರಿಹರನ ಕೃತಿಗಳು : ಹಿರೇಮಲ್ಲೂರ ಈಶ್ವರನ್ : ಪು.ಸಂ. ೩೬೨
೬೧. ಚಾಮರಸ : ಜಿ.ಎಸ್. ಕಾಪಸೆ : ಪು.ಸಂ. ೬
೬೨. ಚಾಮರಸನ ಪ್ರಭುಲಿಂಗಲೀಲೆ : ಎಸ್. ವಿದ್ಯಾಶಂಕರ : ಪು.ಸಂ. ೪೪
೬೩. ಅದೇ : ಪು.ಸಂ. ೯೯

೬೪. ಅದೇ : ಪು.ಸಂ. ೧೧೩
೬೫. ಅದೇ : ಪು.ಸಂ. ೨೮೫
೬೬. ಹರಿಹರ ವಿಚಾರ ಸಂಕಿರಣ : ವಿವಿಧ ಲೇಖಕರು : ಪು.ಸಂ. ೭
೬೭. ಚಾಮರಸ : ಜಿ.ಎಸ್. ಕಾಪಸೆ : ಪು.ಸಂ. ೬
೬೮. ಕನ್ನಡ ಸಾಹಿತ್ಯ ಚರಿತ್ರೆ : (ಸಂ) ಹಾ.ಮಾ. ನಾಯಕ :
(ಕನ್ನಡ ಅಧ್ಯಯನ ಸಂಸ್ಥೆ) ಪು.ಸಂ. ೧೩೭೬
೬೯. ಉದ್ಧೃತ : ಚಾಮರಸ : (ಸಂ) ವಿ. ಸೀತಾರಾಮಯ್ಯ : ಪು.ಸಂ. ೨೭

# ಅಧ್ಯಾಯ-೫

## ಉಪಸಂಹಾರ

ಬಸವಣ್ಣ ಮತ್ತು ಅಲ್ಲಮಪ್ರಭು ಇವರಿಬ್ಬರು ವಚವಯುಗದ ಎರಡು ಕಣ್ಣುಗಳಿದ್ದಂತೆ. ಬಸವಣ್ಣ ದೊಡ್ಡ ಭಕ್ತನಾದರೆ, ಅಲ್ಲಮಪ್ರಭು ದೊಡ್ಡ ಜ್ಞಾನಿ, ಅನುಭಾವಿ. ಇಂಥ ಅಲ್ಲಮಪ್ರಭುವಿನ ಬಗ್ಗೆ ಹರಿಹರ ಮತ್ತು ಚಾಮರಸ ಕವಿಗಳು 'ಪ್ರಭುದೇವರಗಳೆ' ಮತ್ತು 'ಪ್ರಭುಲಿಂಗಲೀಲೆ' ಎಂಬ ಕೃತಿ ರಚಿಸಿದ್ದಾರೆ. ಈ ಇಬ್ಬರು ಕನ್ನಡದ ಮಹತ್ವದ ಕವಿಗಳು. ವೀರಶೈವ ಧರ್ಮಾನುಯಾಯಿಗಳು. ಇಬ್ಬರಿಗೂ ಅಲ್ಲಮನ ಬಗ್ಗೆ ಭಕ್ತಿ, ಗೌರವಗಳಿರುವುದು ಅವರ ಕೃತಿ ಓದಿದಾಗ ಮನವರಿಕೆಯಾಗುತ್ತದೆ.

ಹರಿಹರನ 'ಪ್ರಭುದೇವರಗಳೆ' ಮತ್ತು ಚಾಮರಸನ 'ಪ್ರಭುಲಿಂಗಲೀಲೆ'ಯನ್ನು ಇಲ್ಲಿ ತೌಲನಿಕವಾಗಿ ಅಧ್ಯಯನ ಮಾಡಲಾಗಿದೆ. ಇಬ್ಬರು ಕವಿಗಳು ಮಹಾಜ್ಞಾನಿಯಾದ ಅಲ್ಲಮನನ್ನೆ ಕಥೆಯ ನಾಯಕನನ್ನಾಗಿ ಮಾಡಿಕೊಂಡಿದ್ದರೂ ಕಥೆಯನ್ನು ಹೇಳಿರುವ ರೀತಿ ಭಿನ್ನವಾಗಿದೆ ಅಂತೆ ಛಂದಸ್ಸು ಕೂಡ ಬೇರೆಬೇರೆಯಾಗಿದೆ. ಇಬ್ಬರು ಬದುಕಿದ್ದ ಕಾಲಮಾನವನ್ನು ಗಮನಿಸಿದರೂ ಸಾಕಷ್ಟು ಅಂತರವಿರುವುದು ಗೋಚರವಾಗುತ್ತದೆ. ಆದುದರಿಂದ ಎರಡು ಕೃತಿಗಳಲ್ಲಿ ಸಹಜವಾಗಿಯೇ ಕೆಲವು ಸಾಮ್ಯತೆಗಳಿವೆ ಮತ್ತು ವೈಷಮ್ಯಗಳು ಇವೆ. ಇದನ್ನು ಕುರಿತು ವಿವರವಾಗಿ ಇಲ್ಲಿ ಪರಿಶೀಲಿಸಲಾಗಿದೆ.

ಎರಡನೆಯ ಅಧ್ಯಾಯದಲ್ಲಿ ಹರಿಹರನ ವ್ಯಕ್ತಿ-ವ್ಯಕ್ತಿತ್ವವನ್ನು ಆತನ ಕೃತಿಯ ಒಳಗಿನ ಸಂಗತಿಗಳಿಂದಲೆ ಕಟ್ಟಿಕೊಡುವ ಪ್ರಯತ್ನ ಮಾಡಲಾಗಿದೆ. ಹರಿಹರನ ರಗಳೆಗಳ ಬಗ್ಗೆ ಸಂಕ್ಷಿಪ್ತವಗಿ ನೀಡಿ ಆತನ ಏಕಮಾತ್ರ ಚಂಪೂಕಾವ್ಯ 'ಗಿರಿಜಾ ಕಲ್ಯಾಣ'ದ ಬಗ್ಗೆ ಸಂಕ್ಷಿಪ್ತವಾಗಿ ತಿಳಿಸಲಾಗಿದೆ.

ಮೂರನೆ ಅಧ್ಯಾಯದಲ್ಲಿ ಚಾಮರಸ ಕವಿಯ ಕಾಲ ದೇಶ ಧರ್ಮದ ಬಗ್ಗೆ ವಿದ್ವಾಂಸರ ಅಭಿಪ್ರಾಯಗಳ ಹಿನ್ನೆಲೆಯಲ್ಲಿ ಚರ್ಚಿಸಲಾಗಿದೆ.

ನಾಲ್ಕನೆಯ ಅಧ್ಯಾಯದಲ್ಲಿ 'ಪ್ರಭುದೇವರ ರಗಳೆ'ಯ ರಚನೆಯ ಹಿನ್ನೆಲೆಯನ್ನು ತಿಳಿಸಿ, ಕೃತಿಯ ಕಥಾವಸ್ತುವನ್ನು ಕುರಿತು ವಿಶ್ಲೇಷಿಸಲಾಗಿದೆ. ಚಾಮರಸನ 'ಪ್ರಭುಲಿಂಗಲೀಲೆಯ' ರಚನೆಯ ಹಿನ್ನೆಲೆಯನ್ನು ಹಾಗೂ ಈ ಕೃತಿಯ ಕಥಾವಸ್ತುವನ್ನು ಈ ಅಧ್ಯಾಯದಲ್ಲಿ ವಿಶ್ಲೇಷಿಸಲಾಗಿದೆ.

ಐದನೆಯ ಅಧ್ಯಾಯದಲ್ಲಿ ಹರಿಹರ ಮತ್ತು ಚಾಮರಸರ ಕೃತಿಗಳಲ್ಲಿನ ಕಥಾವಸ್ತುವಿನ ಸಾಮ್ಯ ಮತ್ತು ವೈಷಮ್ಯಗಳನ್ನು ನೋಡಲಾಗಿದೆ. ಎರಡು ಕೃತಿಗಳಲ್ಲಿ ಸನ್ನಿವೇಶ ಮೂಡಿಬಂದಿರುವ ಬಗೆಯನ್ನು ಮುಖ್ಯ ಘಟನೆಗಳಾದ ಅಲ್ಲಮನ ಹುಟ್ಟು, ಕಾಮಲತೆ ಅಥವಾ ಮಯೆಯ ಭೇಟಿ, ಅನಿಮಿಷಯೋಗಿಯ ಭೇಟಿ ಇವೆ ಮೊದಲಾದ ಘಟನೆಗಳನ್ನು ತೌಲನಿಕವಗಿ ಅಭ್ಯಾಸ ಮಾಡಲಾಗಿದೆ. ಕಾಮಲತೆಯ ಪ್ರಸಂಗದಲ್ಲಿ ಹರಿಹರನ ನಿಲುವು ವಾಸ್ತವಕ್ಕೆ ಸಮೀಪವಾಗಿರುವುದನ್ನು

ಕಾವ್ಯಮಯವಾಗಿರುವುದನ್ನು ಕುರಿತು ಚರ್ಚಿಸಲಾಗಿದೆ. ಚಾಮರಸ ಇದೇ ಸಂದರ್ಭವನ್ನು ಪುರಾಣಮಯವಾಗಿ ಮಾಡಿರುವುದನ್ನು ಕುರಿತು ವಿಶ್ಲೇಷಣೆ ಮಾಡಲಾಗಿದೆ.

ಹರಿಹರ ಚಿತ್ರಿಸಿರುವ ಮನುಷ್ಯ ಸಹಜವಾದ ವಿಶಿಷ್ಟ ಗುಣಲಕ್ಷಣದ ಅಲ್ಲಮನ ಪಾತ್ರಚಿತ್ರಣ ಹಾಗೂ ಶಿವ ಬೇರೆಯಲ್ಲ ಅಲ್ಲಮ ಬೇರೆಯಲ್ಲ ಎಂಬ ನಿಲುವಿನಲ್ಲಿ ಪಾತ್ರಚಿತ್ರಣ ಮಾಡಿರುವ ಚಾಮರಸವ ಮನೋಭಾವವನ್ನು ತೌಲನಿಕವಾಗಿ ಇಲ್ಲಿ ಅಭ್ಯಾಸ ಮಾಡಲಾಗಿದೆ. ಅಲ್ಲಮನ ವ್ಯಕ್ತಿತ್ವವನ್ನು ಉಜ್ವಲಗೊಳಿಸಲು ಚಾಮರಸ ತಂದಿರುವ ಪವಾಡ ಪ್ರಸಂಗಗಳನ್ನು ಕುರಿತು ಚರ್ಚಿಸಲಾಗಿದೆ.

ಇದೆ ರೀತಿ ಹರಿಹರ ಬರೆದ 'ರಗಳೆ' ಛಂದಸ್ಸಿನ ಬಗ್ಗೆ, ಚಾಮರಸನ ಷಟ್ಪದಿ ಛಂದಸ್ಸಿನ ಬಗ್ಗೆ ಸಂಕ್ಷಿಪ್ತವಾಗಿ ವಿಚಾರ ಮಾಡಲಾಗಿದೆ. ಕಾವ್ಯದಲ್ಲಿ ಮುಖ್ಯವಾಗಿ ಗಮನ ಸೆಳೆಯುವ ಭಕ್ತಿ, ಅದ್ಭುತ, ಶೃಂಗಾರ ರಸಗಳನ್ನು ಕುರಿತು ಹೇಳಲಾಗಿದೆ. ಇಬ್ಬರು ಕವಿಗಳ ಜೀವನದರ್ಶನವನ್ನು ಕುರಿತು ಈ ಅಧ್ಯಾಯದಲ್ಲಿ ವಿಶ್ಲೇಷಣೆ ಮಾಡಲಾಗಿದೆ.

ಒಟ್ಟಾರೆಯಾಗಿ ಈ ತೌಲನಿಕ ಅಧ್ಯಯನದ ಮೂಲಕ ಕನ್ನಡದ ಇಬ್ಬರು ಮಹಾಕವಿಗಳ ಪ್ರತಿಭೆಯನ್ನು ಅವರ ಕೃತಿಗಳ ವೈಶಿಷ್ಟ್ಯವನ್ನು ಗುರುತಿಸುವ ಪ್ರಯತ್ನವನ್ನು ಮಾಡಲಾಗಿದೆ.

## ಆಕರ ಗ್ರಂಥಗಳು

1. ಎಂ. ಎಸ್. ಬಸವಲಿಂಗಯ್ಯ,
ಎಂ. ಆರ್. ಶ್ರೀನಿವಾಸಮೂರ್ತಿ ಪ್ರಭುಲಿಂಗಲೀಲೆ ಸಂಗ್ರಹ

2. ಎಂ. ಎಸ್. ಸುಂಕಾಪುರ ಮಹಾಕವಿ ಹಂಪೆಯ
ಹರಿಹರದೇವಕೃತ ನೂತನ ಪುರಾತನ ರಗಳೆಗಳು
ಕರ್ನಾಟಕ ವಿ.ವಿ. ಧಾರವಾಡ - 1976.

## ಪರಾಮರ್ಶನ ಗ್ರಂಥಗಳು

1. ಡಾ.ಎಲ್.ಬಸವರಾಜು : ಅಲ್ಲಮನ ವಚನಗಳು
ಗೀತಾ ಬುಕ್ ಹೌಸ್
ಮೈಸೂರು : 1969

2. ಎಸ್. ಬಸವಾರಾಧ್ಯ,
ಎಲ್. ಗುಂಡಪ್ಪ,
ತೆಕ್ಕುಂಜಗೋಪಾಲಕೃಷ್ಣ ಭಟ್ಟ : ಹರಿಹರದೇವ
ಐ.ಬಿ.ಎಚ್.
ಬೆಂಗಳೂರು : 1981

3. ಡಾ.ಎಂ.ಎಸ್. ಸುಂಕಾಪುರ : ನೂತನ ಪುರಾತನರ ರಗಳೆಗಳು
ಕನ್ನಡ ಅಧ್ಯಯನ ಪೀಠ
ಧಾರವಾಡ : 1976

4. ಡಾ. ಕೆ. ಮರುಳ ಸಿದ್ಧಪ್ಪ : ಷಟ್ಪದಿ ಸಾಹಿತ್ಯ
ಬೆಂಗಳೂರು ವಿ.ವಿ. : 2000

5. ಡಾ. ಕಾಳೇಗೌಡ ನಾಗವಾರ : ತ್ರಿಪದಿ, ರಗಳೆ ಮತ್ತು ಜನಪದ ಸಾಹಿತ್ಯ :
ಬೆಂಗಳೂರು ವಿ.ವಿ. : 2000

6. ಡಾ. ಜಿ.ಎಸ್. ಶಿವರುದ್ರಪ್ಪ : ಕನ್ನಡ ಸಾಹಿತ್ಯ ಸಮೀಕ್ಷೆ :
ಬೆಂಗಳೂರು ವಿ.ವಿ. : 2000

7. ಬಸವರಾಜ ಪುರಾಣಿಕ : ಅನುಪಮಚರಿತ ಅಲ್ಲಮ ಪ್ರಭುದೇವ –
ಅನಿಮಿಷ ಪ್ರಕಾಶನ : 1999

8. ಸಂ.ವಿ. ಸೀತಾರಾಮಯ್ಯ,
ಡಾ. ಟಿ.ವಿ ವೆಂಕಟಾಚಲಶಾಸ್ತ್ರಿ : ಚಾಮರಸ
ಐ.ಬಿ.ಎಚ್. ಪ್ರಕಾಶನ :
ಬೆಂಗಳೂರು : 1987

9. ವಿವಿಧ ಲೇಖಕರು : ಹರಿಹರ ವಿಚಾರ ಸಂಕಿರಣ:
ಕನ್ನಡ ಸಾಹಿತ್ಯ ಪರಿಷತ್ತು :
ಬೆಂಗಳೂರು : 1999

